# ಭಾರತೀಯ ಸಂಸ್ಕೃತಿಯಲ್ಲಿ

# ಗೋವು



ಸಂಪಾದಕರು

ಶ್ರೀನಿವಾಸ ಸು. ಮಠದ.

ಭಾರತೀಯ ಸಂಸ್ಕೃತಿಯಲ್ಲಿ

# ಗೋವು

ಸಂಪಾದಕರು

**ಶ್ರೀನಿವಾಸ ಸು. ಮಠದ.**

ಪ್ರಕಾಶಕರು

**ಗೀತಾ ಪ್ರಕಾಶನ**

ಅಜರೇಕರ ಚಾಳ, ವಿಜಾಪುರ-586101.

# " BHARATIYA SAMSKRUTIYALLI GOVU "


| | | |
|---|---|---|
| Written By | : | **SRINIVAS S. MATHAD** B.Sc., M.A.<br>Ajarekar Chal, Menaxi Chowk,<br>BIJAPUR-586101. (Karnataka) |
| First Edition | : | 2006 |
| Copies | : | 1000 |
| Copyright | : | Reserved by the author |
| Pages | : | 102 |
| Price | : | Rs. 25/- |
| Publisher | : | **GEETA PRAKASHAN**<br>Ajarekar Chal, Meenaxi Chowk,<br>BIJAPUR-586101. (Karnataka) |
| Priners | : | **PAVAMAN PRINTERS**<br>Opp. Govt. Polytechnic,Bagalkot Road,<br>BIJAPUR-586101.Ph : 9448021885 |


# " ಭಾರತೀಯ ಸಂಸ್ಕೃತಿಯಲ್ಲಿ ಗೋವು "


| | | |
|---|---|---|
| ಲೇಖಕರು | : | ಶ್ರೀನಿವಾಸ ಎಸ್. ಮಠದ<br>ಅಜರೇಕರ ಚಾಳ, ಮೀನಾಕ್ಷಿ ಚೌಕ,<br>ವಿಜಾಪುರ-586101. |
| ಮೊದಲ ಆವೃತ್ತಿ | : | 2006 |
| ಪ್ರತಿಗಳು | : | 1000 |
| ಹಕ್ಕುಗಳು | : | ಲೇಖಕರವು |
| ಪುಟ | : | 102 |
| ಪ್ರಕಾಶಕರು | : | ಗೀತಾ ಪ್ರಕಾಶನ<br>ಅಜರೇಕರ ಚಾಳ, ಮೀನಾಕ್ಷಿ ಚೌಕ,<br>ವಿಜಾಪುರ-586101. |
| ಮುದ್ರಕರು | : | ಪವಮಾನ ಪ್ರಿಂಟರ್ಸ<br>ಸರಕಾರಿ ಪಾಲಿಟೆಕ್ನಿಕ್ ಎದುರಿಗೆ,<br>ಬಾಗಲಕೋಟ ರಸ್ತೆ, ವಿಜಾಪುರ-586101.<br>ಫೊ : 9448021885 |



ಶ್ರೀಮತ್ಪರಮಹಂಸ ಪರಿವ್ರಾಜಕೇತ್ಯಾದಿ ಬಿರುದಾಲಂಕೃತ
ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಶ್ರೀಮನ್‌ಮಧ್ವಾಚಾರ್ಯ
ಮೂಲ ಮಹಾ ಸಂಸ್ಥಾನ ಶ್ರೀಮದುತ್ತರಾದಿ ಮಠಾಧೀಶರಾದ

**ಶ್ರೀ ಶ್ರೀ 1008 ಶ್ರೀ ಸತ್ಯ ಪ್ರಮೋದತೀರ್ಥರ ಕರಕಮಲ ಸಂಜಾತರಾದ**
**ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ**

# ಅನುಗ್ರಹ ಸಂದೇಶ

ಸಕಲದೇವತೆಗಳ ಅಧಿಷ್ಠಾನ ಗೋಮಾತೆ. ಪ್ರಾಚೀನಕಾಲದಿಂದಲೂ ಗೋವು ಪೂಜನೀಯವಾಗಿದೆ. ಕಾವ್ಯ, ಇತಿಹಾಸ, ಪುರಾಣಗಳಲ್ಲಿಯೂ ಗೋವಿನ ವರ್ಣನೆ ಸುಂದರವಾಗಿ ನಿರೂಪಿತವಾಗಿದೆ. ಗೋವಿನ ಬಗ್ಗೆ ಶ್ರೀಮನ್ಮಹಾಭಾರತ ಹೀಗೆ ಹೇಳಿದೆ.

ಗಾವೋ ಮೇ ಅಗ್ರತಃ ಸಂತು
ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು
ಗವಾಂ ಮಧ್ಯೇ ವಸಾಮ್ಯಹಮ್ ॥ ಎಂದು.

ನನ್ನ ಮುಂದೆ ಗೋವುಗಳಿರಲಿ, ನನ್ನ ಹಿಂಬದಿಯಲ್ಲಿ ಗೋವುಗಳಿರಲಿ, ನನ್ನ ಮನದಲ್ಲಿ ಗೋವು ನೆಲೆಸಿರಲಿ. ಅವುಗಳ ನಡುವೆ ವಾಸಿಸುವ ಭಾಗ್ಯ ನನಗಿರಲಿ. ಪುಣ್ಯಫಲಕ್ಕೆ ನಿಧಿಯಾದ ಗೋಮಾತೆಯ ಸಂರಕ್ಷಣೆ ಅತ್ಯಾವಶ್ಯಕ. ಗೋಹತ್ಯೆ ಮೊದಲಾದ ದುಷ್ಕೃತ್ಯಗಳು ನಡೆದರೂ ಅದಕ್ಕೆ ಮರು ಉತ್ತರ ಯಾರಿಂದಲೂ ಬಂದಿಲ್ಲ. ಕೇವಲ ಮೂಕ ಪ್ರೇಕ್ಷಣೆ ನಡೆದಿದೆ. ಇದರಿಂದಾಗಿಯೇ

ದೇಶದಾದ್ಯಂತ ಗಲಭೆ, ದುರ್ಭಿಕ್ಷೆ, ಅತಿವೃಷ್ಟಿ ಮೊದಲಾದ ಅಮಂಗಳ ಕಾರ್ಯಗಳು ಜರುಗುತ್ತಿವೆ. ಆದ್ದರಿಂದ ಗೋವಿನ ರಕ್ಷಣೆ. ಪುಣ್ಯದ ರಕ್ಷಣೆ, ಹಾಗೂ ಜಗತ್ತಿನ ರಕ್ಷಣೆಯಾಗಿದೆ.

ಗೋವಿನ ರಕ್ಷಣೆ ಮಾಡುವುದು ಪ್ರತಿಯೊಬ್ಬ ಮಾನವನ ಕರ್ತವ್ಯ. ಗೋವುಗಳ ರಕ್ಷಣೆಯನ್ನು ಮನೆಯಲ್ಲಿ ಮಾಡಲು ಸಾಧ್ಯವಾಗದಿದ್ದಲ್ಲಿ, ಗೋಶಾಲಾಗಳಿಗೆ ಹೋಗಿ ನಿಮ್ಮ ಯೋಗ್ಯತೆಗೆ ತಕ್ಕಂತೆ ಒಂದು ಅಥವಾ ಹಲವಾರು ಗೋವುಗಳ ವೆಚ್ಚದ ಜವಾಬ್ದಾರಿಯನ್ನು ತೆಗೆದುಕೊಂಡರೆ ಸಾಕು ಲೋಕಕ್ಕೆ ಕಲ್ಯಾಣ. ಅನಂತ ಪುಣ್ಯ ಸಂಪಾದನೆ ನಿಶ್ಚಿತವಾಗಿಯೂ ಆಗುತ್ತದೆ. ಯಾವ ಸಂಶಯವೂ ಬೇಡ.

ಪ್ರಕೃತ ಪ್ರತಿನಿತ್ಯದಲ್ಲಿ ಮಾಡುವ ಗೋಪೂಜೆ, ಗೋಸೇವೆ, ಮೊದಲಾದವು ಸಕಲಾಭೀಷ್ಟದಾಯಕವೂ, ಜ್ಞಾನ, ಭಕ್ತಿ, ವೈರಾಗ್ಯಾದಿಗಳಿಗೆ ವರ್ಧಕವಾಗಿದೆ. ಆದಕಾರಣ ಪ್ರತಿಯೊಬ್ಬರೂ ತಪ್ಪದೇ ಗೋಪೂಜಾದಿಗಳನ್ನು ಆಚರಿಸಿ ಧೇನುವಿನ ಅಂತರ್ಯಾಮಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.

ಇಂಥ ಅತಿ ಮಹತ್ವಸ್ಥಾನದಲ್ಲಿರುವ ಮುಗ್ಧ ಭಾವದ ಗೋವಿನ ಉಪಕಾರದ ಚಿಂತನೆ, ಗೋದಾನ, ಗೋ ಸಂರಕ್ಷಣೆ, ಗೋವ್ರತ ಗೋವತ್ಸದ್ವಾದಶಿ ವ್ರತ, ಶುದ್ಧಿದಾಯಕ ಪಂಚಗವ್ಯ, ಇನ್ನೂ ಅನೇಕ ವಿಷಯಗಳನ್ನೊಳಗೊಂಡ "ಭಾರತೀಯ ಸಂಸ್ಕೃತಿಯಲ್ಲಿ ಗೋವು" ಎಂಬ ಹೊತ್ತಿಗೆಯನ್ನು ಶ್ರೀ ಶ್ರೀನಿವಾಸ ಸು. ಮಠದವರು ರಚಿಸಿದ್ದಾರೆ. ಇಷ್ಟೇ ಅಲ್ಲಾ. ಈ ತರಹದ ಅನೇಕ ಜನೋಪಯೋಗಿಯಾದ ಹೊತ್ತಿಗೆಗಳನ್ನು ರಚಿಸಿ ಜನರ ಮೆಚ್ಚುಗೆಗೆ ಪಾತ್ರರಾದ ಶ್ರೀ ಶ್ರೀನಿವಾಸ ಸು. ಮಠದ ಇವರಿಗೆ ಶ್ರೀ ದಿಗ್ವಿಜಯ ರಾಮಚಂದ್ರಾಭಿನ್ನ ಶ್ರೀಮೂಲರಾಮಚಂದ್ರದೇವರು ಅನುಗ್ರಹವನ್ನು ಮಾಡಲಿ ಎಂದು ಪ್ರಾರ್ಥಿಸುತ್ತೇವೆ.

# ಅರ್ಪಣೆ

ಶ್ರೀ ಶ್ರೀಧರಾಚಾರ್ಯ ಕಟ್ಟಿ, ಸಾ॥ ಹಾವೇರಿ
ಇವರು ತಮ್ಮ ಧರ್ಮಪತ್ನಿ

**ಕು॥ ಸೌ॥ ಶ್ರೀಮತಿ ಜಾನಕಿಬಾಯಿ ಶ್ರೀಧರಾಚಾರ್ಯ ಕಟ್ಟಿ**
**ಇವರ ಸ್ಮರಣಾರ್ಥ**

ಈ ಗ್ರಂಥದ ಮುದ್ರಣ ವೆಚ್ಚವನ್ನು ವಹಿಸಿ
ಈ ಗ್ರಂಥವನ್ನು
ಶ್ರೀ ಮತ್ಪರಮಹಂಸ ಪರಿವ್ರಾಜಕೇತ್ಯಾದಿ ಬಿರುದಾಲಂಕೃತರಾದ
ಶ್ರೀ ಶ್ರೀ 1008 ಶ್ರೀಮದುತ್ತರಾದಿ ಮಠಾಧೀಶರಾದ

**ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀ ಪಾದಂಗಳವರ**

ಅಂತರ್ಯಾಮಿ
ಶ್ರೀಹನುಮದ್ ಭೀಮ ಮಧ್ವಾಂತರ್ಗತ
ಶ್ರೀಮನ್ಮೂಲರಾಮ ದಿಗ್ವಿಜಯರಾಮಚಂದ್ರಾಭಿನ್ನ
ಶ್ರೀ ತಿರುಪತಿ ತಿಮ್ಮಪ್ಪನ ಅಡಿದಾವರೆಗಳಲ್ಲಿ
ಭಕ್ತಿ ಪೂರ್ವಕ ಸಮರ್ಪಿಸಿರುತ್ತಾರೆ.

- ಲೇಖಕ

# ನನ್ನ ಮಾತು

ಆ ಭಗವಂತನ ಪ್ರೇರಣೆ ಹಾಗೂ ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಆಜ್ಞಾನುಸಾರ ಭಾರತೀಯ ಸಂಸ್ಕೃತಿಯಲ್ಲಿ ಗೋವು ಎಂಬ ಕಿರುಹೊತ್ತಿಗೆಯಲ್ಲಿ ಗೋವಿನ ಕುರಿತು ಕೆಲವು ಲೇಖನಗಳನ್ನು, ಸ್ತೋತ್ರಗಳನ್ನು ಸಂಗ್ರಹಿಸಿ ಕೊಟ್ಟಿದ್ದೇನೆ.

ಈ ಗ್ರಂಥವನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಪ್ರಸ್ತುತ ಕೃತಿಗೆ ಅನುಗ್ರಹ ಸಂದೇಶ ನೀಡಲು ಪ್ರಾರ್ಥಿಸಿದಾಗ ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಸಂತೋಷದಿಂದ ಒಪ್ಪಿ ನೀಡಿದ್ದಕ್ಕಾಗಿ ಅವರಿಗೆ ನನ್ನ ಅನಂತ ದಂಡವತ್ ಪ್ರಣಾಮಗಳು ಸಲ್ಲುತ್ತವೆ.

ಈ ಕೃತಿಯ ಸಂಪಾದನ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾ ಗುರುಗಳಾದ ಪಂ. ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ಕೃತಜ್ಞತಾಪೂರ್ವಕ ಶಿ|| ಸಾ|| ನಮಸ್ಕಾರಗಳು.

ಈ ಕೃತಿಯನ್ನು ಪರಿಶೀಲಿಸಿ ಸಲಹೆ ಸೂಚನೆಗಳನ್ನು ಕೊಟ್ಟ ಪಂ|| ಶ್ರೀ ಮೊಖಾಶಿ ಮಧ್ವಾಚಾರ್ಯರಿಗೆ ಹಾಗೂ ಪಂ|| ಪ್ರಸನ್ನಾಚಾರ್ಯ ಕಟ್ಟಿ ಅವರಿಗೆ ನನ್ನ ಕೃತಜ್ಞತಾಪೂರ್ವಕ ಶಿ|| ಸಾ|| ನಮಸ್ಕಾರಗಳು.

ಪ್ರಸ್ತುತ ಕೃತಿಯು ಹೊರಬರಲು ಸಹಾಯಮಾಡಿದ ಸ್ನೇಹಿತ ಶ್ರೀ ವಿನೋದ ಕಟ್ಟಿ, ನನ್ನ ತಮ್ಮ ಚಿ|| ವಾದಿರಾಜ ಮಠದ, ನನ್ನ ಸುಪುತ್ರ ಚಿ|| ಆನಂದತೀರ್ಥ ಮಠದ ಹಾಗೂ ಶ್ರೀ ರಾಘವೇಂದ್ರ ಅಡಬಡ್ಡಿ ಇವರಿಗೆ ನನ್ನ ಹೃತ್ಪೂರ್ವಕ ಆಶೀರ್ವಾದಗಳು.

ಈ ಕೃತಿಯ ಮುದ್ರಣ ವೆಚ್ಚವನ್ನು ವಹಿಸಿದ ಶ್ರೀ ವೇ|| ಮೂ|| ಶ್ರೀಧರಾಚಾರ್ಯ ಕಟ್ಟಿ, ಸಾ|| ಹಾವೇರಿ ಇವರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

ಪ್ರಸ್ತುತ ಕೃತಿಯನ್ನು ಅಂದವಾಗಿ ಮುದ್ರಣ ಮಾಡಿಕೊಟ್ಟ ಶ್ರೀಯುತ ಅಕ್ಕಲಕೋಟ ಬಂಧುಗಳಿಗೆ ಹಾಗೂ ಅವರ ಬಳಗಕ್ಕೆ ನನ್ನ ಧನ್ಯವಾದಗಳು.

27-06-2006
ವಿಜಯಪುರ

ಇತಿ ಸಜ್ಜನ ಸೇವಕ
ಶ್ರೀನಿವಾಸ ಸು. ಮಠದ

# ವಿಷಯಾನುಕ್ರಮಣಿಕಾ



( ಪು.ತಿ.ನೋ.)

# ಗೋವು - ಪರಿಚಯ

ಭಾರತೀಯ ಸಂಸ್ಕೃತಿಯಲ್ಲಿ ಗೋವಿಗೆ ಅತಿಮಹತ್ವದ ಸ್ಥಾನವಿದೆ. ಗೋವು ಸರ್ವದೇವತೆಗಳ ಆವಾಸ ಸ್ಥಾನವಾಗಿದೆ. ಹಾಗಾಗಿ ಗೋವಿಗಿಂತ ಪೂಜ್ಯತಮ ಪ್ರಾಣಿ ಇನ್ನೊಂದಿಲ್ಲ. ಉಪಯುಕ್ತತೆಯಲ್ಲಿಯೂ ಇದರ ಸಮಾನವಾದ ಪ್ರಾಣಿ ಬೇರೊಂದಿಲ್ಲ. ಗೋವಿನ ಹಾಲು, ಮೊಸರು, ತುಪ್ಪ ಅಷ್ಟೇ ಏಕೆ ಅದರ ಮಲ ಮೂತ್ರಗಳೂ ಪರಮ ಪಾವನವಾಗಿವೆ. ಇವುಗಳಿಲ್ಲದೇ ದೇವ, ಪಿತೃ ಕಾರ್ಯಗಳು ನಡೆಯುವುದೇ ಇಲ್ಲ.

ದೇವರ ಮನೆಯನ್ನು ಗೋಮಯ (ಗೋವಿನ ಶಗಣಿ) ದಿಂದ ಸಾರಿಸುವುದಿದೆ. ನೆಲವನ್ನು ಕೂಡ ಗೋಮಯದಿಂದ ಸಾರಿಸಿದರೆ ಮಾತ್ರ ಶುದ್ಧಿಯು ಏರ್ಪಡುತ್ತದೆ. ಅಂದರೆ ಭೂಮಿಯು ಈ ಗೋವಿನ ಶಗಣಿಯಿಂದ ಪವಿತ್ರವೆನಿಸುತ್ತದೆಯಾದ್ದರಿಂದ ಗೋವಿನ ಮಹಿಮೆ ಅಪಾರ.

ಗೋವಿನ ಹಾಲು, ಮೊಸರು, ತುಪ್ಪ, ಶಗಣಿ, ಮೂತ್ರ ಇವುಗಳ ಸಮೂಹಕ್ಕೆ ಪಂಚಗವ್ಯ ವೆಂದು ಹೆಸರು. ಇದನ್ನು ಮಂತ್ರಸಹಿತವಾಗಿ ಯೋಗ್ಯ ಪ್ರಮಾಣದಲ್ಲಿ ಸೇರಿಸಿ ಸೇವಿಸಿದಾಗ ಅದು ಮಾನವನಿಗೆ ದೇಹ ಶುದ್ಧಿಯನ್ನು ತಂದುಕೊಟ್ಟು ಎಲ್ಲ ಪಾಪಗಳನ್ನು ನಾಶಪಡಿಸುತ್ತದೆ.

ಗೋಮೂತ್ರವು ಜಠರಾಗ್ನಿಯನ್ನು ಉದ್ದೀಪನಗೊಳಿಸಿ ಅಗ್ನಿಮಾಂದ್ಯ ದೋಷವನ್ನು ಕಳೆಯುತ್ತದೆ. ಗೋಮಯವು ಕ್ರಿಮಿನಾಶಕವೆನಿಸಿದೆ. ಗೋಘೃತ (ತುಪ್ಪ)ವು ಬುದ್ಧಿ ಶಕ್ತಿಗೂ, ಜ್ಞಾನಶಕ್ತಿಗೂ ಉಪಯುಕ್ತವೆನಿಸಿ ಆಯುರ್ವರ್ಧಕವಾಗಿದೆ. ಗೋಕ್ಷೀರ (ಹಾಲು)ವನ್ನು ಶಿಶುಗಳಿಗೆ ಹಾಕುತ್ತಾರೆ. ಅದು ಸುಲಭವಾಗಿ ಜೀರ್ಣವಾಗುತ್ತದೆ. ಗೋಮಯದಿಂದ ಬಯೋಗ್ಯಾಸ್ ಉತ್ಪತ್ತಿಮಾಡಿ ದೀಪ, ಅಡಿಗೆಗಳನ್ನು ಮಾಡಬಹುದಾಗಿದೆ.

ಗೋವುಗಳು ಎಬ್ಬಿಸುವ ಧೂಳಿಯ ಕಾಲವು ಗೋಧೂಳಿ ಲಗ್ನ ಎನಿಸಿ ಅದು ಪ್ರಶಸ್ತಕಾಲವಾಗಿದೆ. ಗೋಧೂಳಿಯಲ್ಲಿ ಹಾಯ್ದು ಬರುವಿಕೆಯು ವಾಯವ್ಯಸ್ನಾನ ವೆನಿಸಿ ಪವಿತ್ರಸ್ನಾನವಾಗಿದೆ. ಗೋಮೂತ್ರ ಸ್ನಾನವು ಗಂಗಾ ಸದೃಶ ಸ್ನಾನವಾಗಿದೆ. ಇದರಿಂದ ಹತ್ತು ಜನ್ಮಗಳ ಪಾಪವು ನಾಶವಾಗುತ್ತದೆ. ಕಪಿಲಾ ಗೋವಿನ ಪ್ರದಕ್ಷಿಣೆಯು ಭೂಪ್ರದಕ್ಷಿಣೆಯ ಪುಣ್ಯದೊರಕಿಸಿಕೊಡುತ್ತದೆ. ಗೋವಿನ ಜೊತೆ ವಾಸ ಭಗವಂತನಿಗೆ ಅತಿ ಪ್ರೀತಿಕರವೆನಿಸಿದೆ. ಗೋವಿನ ಮೈಮೇಲೆ ಕೈಯಾಡಿಸಿ, ಅದರ ಮೈ ತುರಿಸಿದರೆ ತೀರ್ಥಯಾತ್ರೆ ಮಾಡಿದ ಫಲ ಬರುತ್ತದೆ.

ತಾಯಿಯನ್ನು ಕೂಗಿ ಕರೆಯುವ ಸಂಸ್ಕೃತ ಶಬ್ದವು ಅಂಬಾ ಎಂದಾಗಿದೆ. ಇಂದು ತಾಯಿಯನ್ನು ಕೂಗಿ ಕರೆಯಲು ಈ ಶಬ್ದವನ್ನು ಉಪಯೋಗಿಸಿ ಭಾರತೀಯ ಸಂಸ್ಕೃತಿಯನ್ನು ಸಾರುವ ಏಕೈಕ ಪ್ರಾಣಿಯೆಂದರೆ ಗೋವು ಮಾತ್ರ ಎಂದು ಹೇಳಿದರೆ

ತಪ್ಪಾಗದು. ಗೋವು ಅಂಬಾ ಎಂದು ಉಚ್ಚರಿಸಿದಾಗ ಅದು ಎಷ್ಟು ದೂರ ಕೇಳಿಸುವುದೋ ಆ ದೂರಕ್ಕೆ ಗವ್ಯೂತಿ ಎಂದು ಕರೆಯುತ್ತಾರೆ.

ಕೋ ರಸೋ ಗೋರಸಂ ವಿನಾ ? (ಗೋರಸವಿಲ್ಲದ ಭೋಜನಕ್ಕೆ ರಸವೆಂತಹುದು ?) ಎಂಬ ಸಂಸ್ಕೃತಗಾದೆ ಗೋದ್ರವ್ಯಗಳ ಮಹತ್ವಕ್ಕೆ ಸಾಕ್ಷಿಯಾಗಿ ನಿಂತಿದೆ. ಗೋವು ಸಜ್ಜನ ವೃಂದಕ್ಕೆ ಹಾಲುಕುಡಿಸಿ ಪೋಷಿಸುವ ಪರೋಪಕಾರಿಯಾದ ಪ್ರಾಣಿಯಾದುದರಿಂದ ಗೋವಿಗೆ ಧೇನು ಎಂಬ ಹೆಸರು ಬಂದಿದೆ. (ಧೇಟ್ ಪಾನೇ, ಧಾಞ - ಧಾರಣ ಪೋಷಣಯೋಃ ಉತ್ಪತ್ತಿಯಿಂದ ಇದು ತಿಳಿದು ಬರುತ್ತದೆ).

ಗೋವನ್ನು ಸ್ತುತಿಸುವ ಮಂತ್ರಗಳು ಋಗ್ವೇದದಲ್ಲಿವೆ. ಗೋಮಾತೆ ಏಕಾದಶರುದ್ರರ ತಾಯಿ, ಅಷ್ಟವಸುಗಳ ಮಗಳು, ದ್ವಾದಶಾದಿತ್ಯರ ಒಡಹುಟ್ಟಿದವಳು ಎಂಬುದಾಗಿ ತಿಳಿದುಬರುತ್ತದೆ. ಗೋವು ಅಮೃತದ ಸ್ರೋತಸ್ಸು. ಅದಿತಿ ಸ್ವರೂಪಿಣಿಯಾದ ಇವಳಲ್ಲಿ ಪಾಪದ ಸಂಬಂಧ ಸ್ವಲ್ಪವೂ ಇಲ್ಲ. ಇವಳನ್ನು ಹಿಂಸಿಸಕೂಡದು.[1]

ನೂತನ ಗೃಹ ಪ್ರವೇಶ ಮಾಡುವಾಗ ಮೊದಲು ಗೋಪ್ರವೇಶವನ್ನು ಮಾಡಿಸುವುದು ವಿಹಿತವಾಗಿದೆ. ಇದರಿಂದ ಸಂಪತ್ತು ಲಭಿಸುವುದೆಂದು ಹೇಳುವುದಿದೆ.

ನಿತ್ಯದಲ್ಲಿ ಪ್ರತಿಯೊಬ್ಬರೂ ನೈವೇದ್ಯ, ವೈಶ್ವದೇವ ಮಾಡಿ ತುಳಸೀ ಭಾಗೀರಥಿ, ಪೂಜೆ ಮಾಡಿ ನೈವೇದ್ಯಕೊಟ್ಟು ನಂತರ ಗೋಗ್ರಾಸ ಕೊಡಬೇಕು.

ಸುರಭೀ ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।

ಗೋಗ್ರಾಸಸ್ತು ಮಯಾದತ್ತಃ ಸುರಭಿಃ ಪ್ರತಿಗೃಹ್ಯತಾಂ ॥

ಗವಾಂತರ್ಯಾಮಿ ಶ್ರೀಗೋಪಾಲಕೃಷ್ಣಃ ಪ್ರೀಯತಾಂ ॥

ಎಂದು ಹೇಳಬೇಕು.

ಅನೇಕ ಪಾಪಗಳ ಪರಿಹಾರಕ್ಕಾಗಿ ಗೋದಾನ ಮಾಡುವುದು ವಿಹಿತವಾಗಿದೆ. ಗೋದಾನ ಮಾಡಿದವರು ಯಮಲೋಕದ ವೈತರಣೀ ನದಿಯನ್ನು ಸುಲಭವಾಗಿ ದಾಟುವರೆಂದು ಗರುಡ ಪುರಾಣದಲ್ಲಿ ತಿಳಿಸಲಾಗಿದೆ.

ಪೂರ್ವಕಾಲದಲ್ಲಿ ಗೋವುಗಳೇ ಧನಸಂಪತ್ತು ಎನಿಸಿದ್ದವು. ಗೋಧನವೆಂದೇ ಅವುಗಳನ್ನು ಕರೆಯುತ್ತಿದ್ದರು. ಬ್ರಾಹ್ಮಣರಿಗೆ ಧನವನ್ನು ದಾನ ಮಾಡುವಾಗ ಗೋವುಗಳನ್ನೇ ಕೊಡುತ್ತಿದ್ದರಂತೆ.

---

(1) ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ ಅಮೃತಸ್ಯನಾಭಿಃ।
ಪ್ರನು ವೋಚಂ ಚಿಕಿತುಷೇ ಜನಾಯ ಮಾ ಗಾಮನಾಗಾಮ್ ಅದಿತಿಂ ವಧಿಷ್ಟ॥

ಗೋವುಗಳ ಸ್ಥಾನದಲ್ಲಿ ವಾಸಿಸುವುದು ಮಹಾ ಪುಣ್ಯಕರ, ಅಂತೆಯೇ ನನ್ನ ಮುಂದೆ ಗೋವುಗಳಿರಲಿ, ನನ್ನ ಹಿಂಬದಿಯಲ್ಲಿ ಗೋವುಗಳಿರಲಿ, ನನ್ನ ಮನದಲ್ಲಿ ಗೋವು ನೆಲೆಸಿರಲಿ. ಅವುಗಳ ನಡುವೆ ವಾಸಿಸುವ ಭಾಗ್ಯ ನನಗಿರಲಿ, ಎಲ್ಲ ಜೀವರಾಶಿಗಳ ಸಂಪತ್ತು ಗೋವೆನಿಸಿದೆ. ದೇವತಾ ಕಾರ್ಯದ ಸಂಪತ್ತು ಸಹ ಇದೇ ಆಗಿದೆ. ಅಂತಹ ದೇವಿಯು ಧೇನುರೂಪದಿಂದ ನನ್ನನ್ನು ರಕ್ಷಿಸಲಿ. ನನ್ನ ಪಾಪಗಳನ್ನು ಕಳೆಯಲಿ ಎಂಬುದಾಗಿ ನಿತ್ಯದಲ್ಲಿ ಪ್ರಾರ್ಥಿಸಬೇಕು[2].

ಒಟ್ಟಿನಲ್ಲಿ ನಿತ್ಯದಲ್ಲಿ ಮಾಡುವ ಗೋಪೂಜೆ, ಗೋಸೇವೆಗಳು ಸಮಸ್ತ ಫಲದಾಯಕವೂ, ಜ್ಞಾನ ಭಕ್ತ್ಯಾದಿಗಳ ವರ್ಧಕವಾಗಿವೆ. ಕಾರಣ ಪ್ರತಿಯೊಬ್ಬರೂ ತಪ್ಪದೇ ಗೋಪೂಜಾದಿಗಳನ್ನು ಆಚರಿಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.



(2) ಗಾವೋ ಮೇ ಅಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥
– ಶ್ರೀ ಮನ್‌ಮಹಾಭಾರತ

ಯಾ ಲಕ್ಷ್ಮೀ ಸರ್ವ ಭೂತಾನಾಂ ಯಾ ಚ ದೇವೇ ಪ್ರತಿಷ್ಠಿತಾ ।
ಧೇನುರೂಪೇಣ ಸಾ ಜೀವಿ ಮಮ ಪಾಪಂ ವ್ಯಪೋಹತು ॥
– ಗರುಡ ಪುರಾಣ

# ಗೋವಿನ ಉತ್ಪತ್ತಿ

ಸಮುದ್ರ ಮಥನ ಕಾಲದಲ್ಲಿ ರುದ್ರದೇವರಿಂದ ವಿಷವು ಕುಡಿಯಲ್ಪಡುತ್ತಿರಲು, ಆ ಸಮುದ್ರ ಮಥನಕ್ಕೆ ತೊಡಗಿದ್ದ ದೇವತೆಗಳು ಮತ್ತು ದೈತ್ಯರು ಸಂತುಷ್ಟರಾಗಿ ವೇಗದಿಂದ ಸಮುದ್ರವನ್ನು ಕಡೆದರು. ಆಗ ಸಮುದ್ರದಿಂದ ಹವಿಸ್ಸಾದ ಹಾಲನ್ನು ಕೊಡುವ ಕಾಮಧೇನುವು ಹುಟ್ಟಿತು[1]. ಯಜ್ಞಸಾಧನವಾದ ಈ ಕಾಮಧೇನುವನ್ನು ತ್ರಿಕಾಲಜ್ಞಾನಿಗಳಾದ ಮುನಿಗಳು ಸ್ವೀಕರಿಸಿದರು[2].

ಗಾವೋಹ ಜಜ್ಞಿರೇ ತಸ್ಮಾತ್ ಎಂಬ ಪುರುಷಸೂಕ್ತದ ಉಕ್ತಿಯಂತೆ ಆ ಪುರುಷರೂಪೀ ಭಗವಂತನಿಂದ ಗೋವುಗಳು ಹುಟ್ಟಿದವು.

ಹಿಂದೆ ಸೃಷ್ಟಿಯ ಆರಂಭದಲ್ಲಿ ಬ್ರಹ್ಮದೇವರು ಪ್ರಜೆಗಳನ್ನು ಸೃಷ್ಟಿಸಬೇಕೆಂದು ದಕ್ಷನಿಗೆ ಆದೇಶನೀಡಿದರು. ಆದರೆ ದಕ್ಷನು ಪ್ರಜೆಗಳಿಗೆ ಹಿತವನ್ನುಂಟು ಮಾಡುವ ಅಪೇಕ್ಷೆಯಿಂದ ಮೊದಲು ಪ್ರಜೆಗಳ ವೃತ್ತಿಯನ್ನು (ಜೀವನದ ಸಾಧನಗಳನ್ನು) ಸೃಷ್ಟಿಸಿದನು.

ದೇವತೆಗಳು ಯಾವ ರೀತಿಯಲ್ಲಿ ಅಮೃತವನ್ನೇ ಆಶ್ರಯಿಸಿ ಜೀವಿಸಿರುವರೋ ಅದೇ ರೀತಿಯಲ್ಲಿ ಪ್ರಜೆಗಳು ಭೂಲೋಕದಲ್ಲಿ ವೃತ್ತಿಯನ್ನಾಶ್ರಯಿಸಿ ಜೀವಿಸುತ್ತಾರೆ.

ಸ್ಥಾವರ ಪ್ರಾಣಿಗಳಿಗಿಂತಲೂ ಜಂಗಮ ಪ್ರಾಣಿಗಳು ಶ್ರೇಷ್ಠವಾದವು. ಜಂಗಮ ಪ್ರಾಣಿಗಳಲ್ಲಿ ಮನುಷ್ಯರು ಶ್ರೇಷ್ಠರು. ಮನುಷ್ಯರಲ್ಲಿ ಬ್ರಾಹ್ಮಣರು ಶ್ರೇಷ್ಠರು. ಏಕೆಂದರೆ ಅವರಲ್ಲಿಯೇ ಯಜ್ಞಗಳು ಪ್ರತಿಷ್ಠಿತವಾಗಿವೆ. ಯಜ್ಞಗಳಿಂದ ಸೋಮರಸವು ಲಭಿಸುತ್ತದೆ. ದೇವತೆಗಳು ಸೋಮರಸ ಪಾನಮಾಡಿ ಆನಂದಪಡುತ್ತಾರೆ. ದೇವತೆಗಳಿಗೆ ಸೋಮರಸವನ್ನು ಒದಗಿಸುವ ಯಜ್ಞವು ಗೋವುಗಳಲ್ಲಿ ಪ್ರತಿಷ್ಠಿತವಾಗಿದೆ. ಗೋವುಗಳಲ್ಲಿರುವ ಹವಿಷ್ಯದಿಂದಲೇ ಯಜ್ಞವು ಸಂಪನ್ನವಾಗುತ್ತದೆ. ಈ ಕಾರಣದಿಂದ ದಕ್ಷನು ಮೊದಲು ಪ್ರಜೆಗಳಿಗೆ ವೃತ್ತಿಯನ್ನು ಸೃಷ್ಟಿಸಿ ಅನಂತರ ಪ್ರಜೆಗಳನ್ನು ಸೃಷ್ಟಿಸಿದನು. ಹುಟ್ಟುತ್ತಲೇ ಸಕಲ ಪ್ರಾಣಿಗಳು ಜೀವನ ಸಾಧನಕ್ಕಾಗಿ ಕೋಲಾಹಲ ಮಾಡಿದವು. ಹಸಿದ ಹಸುಳೆಗಳು ತಾಯಿ-ತಂದೆಗಳ ಸಮೀಪಕ್ಕೆ ಓಡಿಹೋಗುವಂತೆ ಹುಟ್ಟಿದ ಪ್ರಾಣಿಗಳು ಜೀವಿಕೆಯನ್ನು ಕಲ್ಪಿಸಿ ಕೊಡುವ ದಕ್ಷನ ಬಳಿಗೆ ಹೋದವು. ಈ ವಿಷಯ ತಿಳಿದು ಪೂಜ್ಯನಾದ ದಕ್ಷನು ತನ್ನ ಪ್ರಜೆಗಳ ಜೀವಿಕೆಗಾಗಿ ಅಮೃತವನ್ನು ಕುಡಿದನು.

---

(1) ಪೀತೇಗರೇ ವೃಷಾಂಕೇಣ ಪ್ರೀತಾಸ್ತೇಽಮರದಾನವಾಃ ।
ಮಮಂಥುಸ್ತರಸಾ ಸಿಂಧುಂ ಹವಿರ್ಧಾನೀ ತತೋಽಭವತ ॥ (8-8-1)
ಶ್ರೀಮದ್‌ಭಾಗವತ

(2) ತಾಮಗ್ನಿಹೋತ್ರೀಮೃಷಯೋ ಜಗೃಹುರ್ಬ್ರಹ್ಮವಾದಿನಃ ॥
ಶ್ರೀಮದ್‌ಭಾಗವತ

ಅಮೃತಪಾನದಿಂದ ಸಂತೃಪ್ತನಾದ ಪ್ರಜಾಪತಿಯ ಮುಖದಿಂದ ಸುಗಂಧವು ಹೊರ ಸೂಸಿತು. ಸುಗಂಧದ ಜೊತೆಯಲ್ಲಿಯೇ ಸುರಭಿ ಎಂಬ ಹೆಸರಿನ ಗೋವು ಹುಟ್ಟಿತು[3]. ಮುಖದಿಂದ ಹುಟ್ಟಿದ ಆ ಸುರಭಿಯನ್ನು ದಕ್ಷನು ತನ್ನ ಪುತ್ರಿಯನ್ನಾಗಿ ಮಾಡಿಕೊಂಡನು. ದಕ್ಷನ ಮುಖದಿಂದ ಹುಟ್ಟಿದ ಸುರಭಿಯು ಜಗತ್ತಿಗೆ ತಾಯಿಯರಾದ ಸೌರಭೇಯೀ ಎಂಬ ಹೆಸರಿನ ಗೋವುಗಳನ್ನು ಸೃಷ್ಟಿಸಿತು. ಚಿನ್ನದ ಬಣ್ಣದಿಂದ ಕೂಡಿದ್ದ ಸೌರಭೇಯೀ ಧೇನುಗಳು ಕಪಿಲಾಧೇನುಗಳೆಂದು ಪ್ರಸಿದ್ಧವಾದವು.



(3) ಸ ಗತಸ್ತೃಪ್ತಿಂ ತು ಗಂಧಂ ಸುರಭಿಮುದ್ಗಿರನ್ ।
ದದರ್ಶೋದ್ಗಾರ ಸಂವೃತ್ತಾಂ ಸುರಭಿಂ ಮುಖಜಾಂ ಸುತಾಮ್ ।

ಶ್ರೀಮನ್ಮಹಾಭಾರತ

# ಗೋವು ಎಲ್ಲ ಪ್ರಾಣಿಗಳಲ್ಲಿ ಶ್ರೇಷ್ಠ ಏಕೆ ?

ಪೂರ್ವ ಕಾಲದಲ್ಲಿ ಗೋವುಗಳ ಸೃಷ್ಟಿಯಾದ ನಂತರ ಅವೆಲ್ಲವೂ ಸೇರಿ ಒಂದು ಲಕ್ಷ ವರ್ಷಗಳ ಪರ್ಯಂತವಾಗಿ ಬಹಳ ದುಷ್ಕರವಾದ ತಪಸ್ಸನ್ನು ಮಾಡಿದವು. ಎಲ್ಲ ಪ್ರಾಣಿಗಳಿಗಿಂತಲೂ ಶ್ರೇಷ್ಠತ್ವವನ್ನು ಪಡೆಯಬೇಕೆಂಬುದೇ ಆ ತಪಸ್ಸಿನ ಉದ್ದೇಶವಾಗಿತ್ತು[1].

ಲೋಕದಲ್ಲಿ ಪ್ರಚಲಿತವಾಗಿರುವ ಎಲ್ಲ ವಿಧವಾದ ದಕ್ಷಿಣಾವಸ್ತುಗಳಲ್ಲಿ ನಾವೇ ಶ್ರೇಷ್ಠರೆಂದು ಪರಿಗಣಿತರಾಗಬೇಕು. ನಾವು ಯಾವುದೇ ದೋಷದಿಂದ ಲಿಪ್ತರಾಗಬಾರದು[2].

ನಮ್ಮ ಶಗಣಿಯನ್ನು ಶರೀರಕ್ಕೆ ಹಚ್ಚಿಕೊಂಡು ಸ್ನಾನ ಮಾಡುವುದರಿಂದ ಜನರು ಪವಿತ್ರರಾಗಬೇಕು. ದೇವತೆಗಳು ಮತ್ತು ಮನುಷ್ಯರೂ ಪವಿತ್ರತೆಗಾಗಿ ಗೋಮಯವನ್ನು ಉಪಯೋಗಿಸಬೇಕು[3].

ಹಾಗೆಯೇ ಸ್ಥಾವರ ಜಂಗಮ ಪ್ರಾಣಿಗಳೆಲ್ಲವೂ ಗೋಮಯದಿಂದ ಪರಿಶುದ್ಧರಾಗಬೇಕು. ನಮ್ಮನ್ನು ಸತ್ಪಾತ್ರರಲ್ಲಿ ದಾನ ಮಾಡುವವರು ನಮ್ಮ ಲೋಕಗಳಿಗೆ (ಗೋಲೋಕಗಳಿಗೆ) ಹೋಗುವಂತಾಗಬೇಕು[4].

ಇಂಥ ತಪಸ್ಸಿನಿಂದ ಸಂತುಷ್ಟರಾದ ಬ್ರಹ್ಮದೇವರು ಪ್ರತ್ಯಕ್ಷರಾದರು. ಗೋವುಗಳಿಗೆ ನಿಮ್ಮ ಆಶಯದಂತೆ ಎಲ್ಲವೂ ನೆರವೇರಲಿ, ನೀವು ಸಮಸ್ತ ಲೋಕಗಳನ್ನು ಉದ್ಧರಿಸಿರಿ ಎಂದು ವರವಿತ್ತರು.

ತಮ್ಮ ಸಮಸ್ತ ಕಾಮನೆಗಳೂ ಬ್ರಹ್ಮದೇವರಿತ್ತ ವರದಿಂದ ಲಭಿಸಿದ ನಂತರ ಗೋವುಗಳು ತಪಸ್ಸಿನಿಂದ ನಿವೃತ್ತವಾದವು.

---

(1) ಶತಂ ವರ್ಷ ಸಹಸ್ರಾಣಾಂ ತಪಸ್ತಪ್ತಂ ಸುದುಷ್ಕರಮ್ ।
ಗೋಭಿಃ ಪೂರ್ವಂ ವಿಸೃಷ್ಟಾಭಿರ್ಗಚ್ಛೇಮ ಶ್ರೇಷ್ಠತಾಮಿತಿ ॥

ಶ್ರೀಮನ್ಮಹಾಭಾರತ

(2) ಲೋಕೇಽಸ್ಮಿನ್ ದಕ್ಷಿಣಾನಾಂ ಚ ಸರ್ವಾಸಾಂ ವಯಮುತ್ತಮಾಃ ।
ಭವೇಮ ನ ಚ ಲಿಪ್ಯೇಮ ದೋಷೇಣೇತಿ ಪರಂತಪ ॥

ಶ್ರೀಮನ್ಮಹಾಭಾರತ

(3) ಅಸ್ಮತ್ ಪುರೀಷಸ್ನಾನೇನ ಜನಃ ಪೂಯೇತ ಸರ್ವದಾ ।
ಶಕೃತಾ ಚ ಪವಿತ್ರಾರ್ಥಂ ಕುರ್ವೀರನ್ ದೇವ ಮಾನುಷಾಃ ॥

ಶ್ರೀಮನ್ಮಹಾಭಾರತ

(4) ತಥಾ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿಚ ।
ಪ್ರದಾತಾರಶ್ಚ ಲೋಕಾನ್ನೋ ಗಚ್ಛೇಯುರಿತಿ ಮಾನದ ॥ ”

ಆದುದರಿಂದ ಗೋವುಗಳನ್ನು ಪ್ರಾತಃಕಾಲದಲ್ಲಿ ನಮಸ್ಕರಿಸಬೇಕು. ತತ್ಫಲವಾಗಿ ಮನುಷ್ಯನು ಪುಷ್ಟಿಯನ್ನು ಹೊಂದುತ್ತಾನೆ[5].

ಆ ನಂತರದಲ್ಲಿ ಗೋವುಗಳು ಬ್ರಹ್ಮನ ವರದಿಂದಾಗಿ ಸಂಪೂರ್ಣ ಜಗತ್ತಿಗೆ ಆಶ್ರಯ ಭೂತಗಳಾದವು. ಆದುದರಿಂದ ಮಹಾಭಾಗ್ಯಶಾಲಿಗಳಾದ ಗೋವುಗಳು ಪರಮಪವಿತ್ರವೆಂದು ಹೇಳುತ್ತಾರೆ. ಮತ್ತು ಗೋವುಗಳು ಎಲ್ಲ ಪ್ರಾಣಿಗಳಿಗಿಂತಲೂ ಶ್ರೇಷ್ಠ ಹಾಗೂ ವಂದನೀಯಗಳೂ ಆದವು.



(5) ಪ್ರಾತರ್ನಮಸ್ಯಾಸ್ತಾ ಗಾವಸ್ತತಃ ಪುಷ್ಟಿಮವಾಪ್ನುಯಾತ್ ॥

ಶ್ರೀಮನ್ಮಹಾಭಾರತ

# ಗೋನಾಮಗಳು - ಲಕ್ಷಣಗಳು

ಗೋವು ಪರೋಪಕಾರಗಳ ಸಾಕಾರಮೂರ್ತಿ. ಸಕಲ ದೇವತೆಗಳ ಸನ್ನಿಧಾನದಿಂದ ಗೋವು ಪವಿತ್ರತಮವಾದ ಪ್ರಾಣಿಯೆನಿಸಿದೆ. ಇಂಥ ಗೋವಿಗೆ ಅನೇಕ ನಾಮಾಂತರಗಳುಂಟು.

ಮಾಹೇಯೀ ಸೌರಭೇಯಿ ಗೌರುಸ್ರಾ ಮಾತಾ ಚ ಶೃಂಗಿಣೀ ।
ಅರ್ಜುನ್ಯಘ್ನ್ಯಾ ರೋಹಿಣೀ ಸ್ಯಾದುತ್ತಮಾ ಗೋಷು ನೈಚಿಕೀ ॥

ಮಾಹೇಯೀ, ಸೌರಭೇಯೀ, ಗೌ:, ಉಸ್ರಾ, ಮಾತಾ (ಮಾಹಾ), ಶೃಂಗಿಣೀ, ಅರ್ಜುನೀ, ಅಘ್ನ್ಯಾ, ರೋಹಿಣೀ ಹೀಗೆ 9 ಹೆಸರುಗಳುಂಟು. ಧೇನು, ಸುಕರಾ, ಹಸು ಮೊದಲಾದ ಇನ್ನೂ ಅನೇಕ ಹೆಸರುಗಳು ಉಂಟೆಂದು ತಿಳಿದು ಬರುತ್ತದೆ [1].

**ಇನ್ನು ಗೋವಿನ ಲಕ್ಷಣಗಳು ಇಂತಿವೆ :**

ಸಾಸ್ನಾದಿಮತ್ವಂ ಗೋರ್ಲಕ್ಷಣಮ್ ಎಂಬಂತೆ ಕುತ್ತಿಗೆಯಲ್ಲಿ ಜೋತಾಡುವ ಗಂಗೆ ತೊಗಲು ಗೋವಿನ ಅಸಾಧಾರಣ ಲಕ್ಷಣವಾಗಿದೆ. ಇವು ಸುರಭಿಯ ಸಂತತಿಗಳಾಗಿವೆ. ಆದ್ದರಿಂದ ಹಸುವಿನಂತೆ ಆಕಾರವಿದ್ದು ಹಾಲು ಹಿಂಡುವ ಪ್ರಾಣಿಗಳನ್ನು ಗೋವು ಎನ್ನಲು ಬರುವುದಿಲ್ಲ. ಗೋವಾಗಬೇಕಾದರೆ ಅವುಗಳಲ್ಲಿ ಮೇಲಿನ ಅಸಾಧಾರಣ ಲಕ್ಷಣವಿರಲೇಬೇಕು. ಅದು ಇಲ್ಲದ ಗೋವಿನ ಆಕಾರದ ಪ್ರಾಣಿಗಳಿಗೆ ಗವಯ ಗಳೆಂದು ಹೇಳುವುದುಂಟು. ಇವು ಕಾಮಧೇನುವಿನ ವಂಶದ ಕುಡಿಗಳಲ್ಲ. ಇತ್ತೀಚೆಗೆ ಮಿಶ್ರತಳಿಗಳು ಹೆಚ್ಚಾಗಿ ನೋಡಲು ಸಿಗುತ್ತವೆ. ಇವುಗಳಿಗೆ ಗವಾಭಾಸಗಳೆಂದೂ ಕರೆಯುತ್ತಾರೆ.

**ಗೋವಿನ ಅಶುಭ ಲಕ್ಷಣಗಳು ಇಂತಿವೆ :**

ಕಣ್ಣುಗಳಲ್ಲಿ ನೀರು ಸೋರುತ್ತಿರುವುದು, ಇಲಿಯಂತೆ ಕಿರುಗಣ್ಣುಗಳು, ಶಿಥಿಲವಾಗಿ ಆಡುತ್ತಿರುವ ಕೊಂಬುಗಳು, ಕತ್ತೆಯ ಬಣ್ಣ, ನಾಲ್ಕು, ಏಳು ಮತ್ತು ಹತ್ತು ಹಲ್ಲುಗಳಿರುವುದು, ಜೋಲಾಡುತ್ತ ತಲೆ ಬಗ್ಗಿರುವುದು, ಇಳಿಜಾರಿನ ಬೆನ್ನು, ದಪ್ಪವಾಗಿಯೂ, ಮೋಟಾಗಿಯೂ ಇರುವ ಕತ್ತು, ಕಪ್ಪಾಗಿಯೂ ಅತಿ ಉದ್ದವಾಗಿಯೂ ಇರುವ ನಾಲಿಗೆ, ಯವಾಕಾರದ ಬಹಳ ಸೂಕ್ಷ್ಮವಾದ ಸೊಂಟ, ಒಡೆದು ಭಿನ್ನವಾಗಿರುವ ಕಾಲಿನ ಗೊರಸು, ಇವೆಲ್ಲವೂ ಗೋವಿನ ಅಶುಭ ಲಕ್ಷಣಗಳು ಎಂಬುದಾಗಿ ಬೃಹತ್ ಸಂಹಿತಾ ಗ್ರಂಥದ 61ನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ.

ವೇದದಲ್ಲಿ ಗೋವಿಗೆ ಅಘ್ನ್ಯಾ ಎಂದು ಕರೆದಿದ್ದಾರೆ. ಯಾಸ್ಕರು ಈ ನಾಮಕ್ಕೆ ಅಹಂತವ್ಯಾಭವತಿ ಇತಿ ಎಂಬುದಾಗಿ ತಿಳಿಸುತ್ತಾ ಗೋವು ಕೊಲ್ಲಲ್ಪಡದ ಪ್ರಾಣಿ ಎಂದು ತಿಳಿಸಿರುವುದನ್ನು ಗಮನದಲ್ಲಿಡಬೇಕು.



---

(1) ಯಾಸ್ಕರು ನಿರುಕ್ತದಲ್ಲಿ 9 ವೇದೋಕ್ತಗೋನಾಮಗಳನ್ನು ಒಟ್ಟಿಗೆ ಸೇರಿಸಿದ್ದಾರೆ. 1) ಅಘ್ನ್ಯಾ, 2) ಉಸ್ರಾ, 3) ಉಸ್ರಿಯಾ, 4) ಅಹೀ, 5) ಮಹೀ, 6) ಅದಿತಿಃ, 7) ಇಲಾ, 8) ಜಗತೀ, 9) ಶಕ್ವರೀ
ಅಲ್ಲದೇ ಗೋ ಶಬ್ದಕ್ಕೆ ಪರ್ಯಾಯ ವಾಚಕವಾದ ಧೇನು ಶಬ್ದಕ್ಕೆ ನಿರುಕ್ತದಲ್ಲಿ ಧೇನು : ಧಯತೇರ್ವಾ, ಧಿನೋತೇರ್ವಾ, ಧಯತೇऽಸೌ ವತ್ಸೇನ ಇತಿ, ಎಂಬುದಾಗಿ ವ್ಯಾಖ್ಯಾನ ಮಾಡಿರುವುದು ಗಮನಾರ್ಹ.

# ಗೋವುಗಳ ವೈಶಿಷ್ಟ್ಯ (ಮಹಾತ್ಮೆ)

ಗೋವುಗಳ ನಾಮ - ಗುಣಗಳ ಕೀರ್ತನೆ ಮತ್ತು ಶ್ರವಣ, ಗೋವುಗಳನ್ನು ದಾನವಾಗಿ ಕೊಡುವುದು, ಅವುಗಳ ದರ್ಶನ - ಇವೆಲ್ಲವೂ ಶಾಸ್ತ್ರಗಳಲ್ಲಿ ಪ್ರಶಂಸೆ ಮಾಡಲ್ಪಟ್ಟಿವೆ. ಗೋವಿನ ಕೀರ್ತನೆ, ಶ್ರವಣ, ದಾನ, ದರ್ಶನಾದಿಗಳು ಪಾಪಹರಗಳೂ ಮತ್ತು ಮಂಗಲಪ್ರದಗಳೂ ಆಗಿವೆ [1].

ಗೋವುಗಳು ಯಾವಾಗಲೂ ಸಂಪತ್ತಿಗೆ ಮೂಲಕಾರಣಗಳಾಗಿವೆ. ಅವುಗಳಲ್ಲಿ ಪಾಪವೆಂಬುದೇ ಇಲ್ಲ. ಗೋವುಗಳು ಮನುಷ್ಯರಿಗೆ ಅನ್ನಕೊಡುವ ಮಾತೃಸ್ವರೂಪಗಳಾಗಿವೆ. ದೇವತೆಗಳಿಗೆ ಬೇಕಾದ ಶ್ರೇಷ್ಠವಾದ ಹವಿಸ್ಸನ್ನು (ತುಪ್ಪವನ್ನು) ಗೋವುಗಳೇ ನೀಡುತ್ತವೆ [2].

ಸ್ವಾಹಾಕಾರ ವಷಟ್ಕಾರಗಳು ಗೋವಿನಲ್ಲಿ ಸದಾ ಪ್ರತಿಷ್ಠಿತವಾಗಿರುತ್ತವೆ. ಗೋವುಗಳು ಯಜ್ಞದ ನಾಯಕಿಯರೂ ಮತ್ತು ಮುಖವೂ ಆಗಿವೆ [3].

ಗೋವುಗಳು ವಿಕಾರ ರಹಿತವಾದ ಅಮೃತವನ್ನು ಹೊಂದಿರುತ್ತವೆ. ಕರೆದರೆ ಅಮೃತವನ್ನೇ ಸುರಿಸುತ್ತವೆ. ಸರ್ವಲೋಕಗಳಿಂದಲೂ ಸತ್ಕರಿಸಲ್ಪಡುವ ಗೋವುಗಳು ಅಮೃತಕ್ಕೆ ಆಶ್ರಯಸ್ಥಾನಗಳಾಗಿವೆ[4].

ಈ ಜಗತ್ತಿನಲ್ಲಿ ಗೋವುಗಳು ಶರೀರದಿಂದಲೂ, ತೇಜಸ್ಸಿನಿಂದಲೂ ಅಗ್ನಿಗೆ ಸಮಾನವಾಗಿವೆ. ತೇಜಸ್ಸಿನ ರಾಶಿಯಂತೆಯೇ ಇರುವ ಇವು ಪ್ರಾಣಿಗಳಿಗೆ ಸುಖದಾಯಕವಾಗಿವೆ [5].

---

(1) ಕೀರ್ತನಂ ಶ್ರವಣಂ ದಾನಂ ದರ್ಶನಂ ಚಾಪಿ ಪಾರ್ಥಿವ ।
ಗವಾಂ ಪ್ರಶಸ್ಯತೇ ವೀರ ಸರ್ವಪಾಪಹರಂ ಶಿವಮ್ ॥

(2) ಗಾವೋ ಲಕ್ಷ್ಮ್ಯಾಃ ಸದಾ ಮೂಲಂ ಗೋಷು ಪಾಪ್ಮಾ ನ ವಿದ್ಯತೇ ।
ಅನ್ನಮೇವ ಸದಾ ಗಾವೋ ದೇವಾನಾಂ ಪರಮಂ ಹವಿಃ ॥

(3) ಸ್ವಾಹಾಕಾರ ವಷಟ್ಕಾರೌ ಗೋಷು ನಿತ್ಯಂ ಪ್ರತಿಷ್ಠಿತೌ ।
ಗಾವೋ ಯಜ್ಞಸ್ಯ ನೇತ್ರ್ಯೋ ವೈ ತಥಾ ಯಜ್ಞಸ್ಯ ತಾ ಮುಖಮ್ ॥
ಶ್ರೀಮನ್ಮಹಾಭಾರತ

(4) ಅಮೃತಂ ಹ್ಯವ್ಯಯಂ ದಿವ್ಯಂ ಕ್ಷರಂತಿ ಚ ವಹಂತಿಚ ।
ಅಮೃತಾಯತನಂ ಚೈತಾಃ ಸರ್ವಲೋಕ ನಮಸ್ಕೃತಾಃ ॥
ಶ್ರೀಮನ್ಮಹಾಭಾರತ

(5) ತೇಜಸಾ ವಪುಷಾ ಚೈವ ಗಾವೋ ವಹ್ನಿಸಮಾ ಭುವಿ ।
ಗಾವೋ ಹಿ ಸುಮಹತ್ತೇಜಃ ಪ್ರಾಣಿನಾಂ ಚ ಸುಖಪ್ರದಾಃ ॥
ಶ್ರೀಮನ್ಮಹಾಭಾರತ

ಗೋವುಗಳು ಸ್ವರ್ಗಕ್ಕೆ ಸೋಪಾನರೂಪವಾಗಿವೆ. ಸ್ವರ್ಗದಲ್ಲಿಯೂ ಗೋವುಗಳು ಪೂಜಿಸಲ್ಪಡುತ್ತವೆ. ಗೋವುಗಳು ಸಮಸ್ತಕಾಮನೆಗಳನ್ನು ಪೂರೈಸಿಕೊಡುವ ದೇವತೆಗಳೂ ಆಗಿವೆ. ಅವುಗಳಿಗಿಂತಲೂ ಶ್ರೇಷ್ಠವಾದುದು ಬೇರೆ ಯಾವುದೂ ಇಲ್ಲ[6].

ಗೋವುಗಳಿಗೆ ಸಮಾನವಾದ ಧನವು ಬೇರೆ ಇರುವುದಿಲ್ಲ[7] ಎಂಬುದಾಗಿ ತಿಳಿಸಿರುವುದು ಇಲ್ಲಿ ಗಮನಾರ್ಹವಾಗಿದೆ.

ಇತರ ಪ್ರಾಣಿಗಳಿಗಿಂತ ಗೋವು ಶ್ರೇಷ್ಠವೆನಿಸಿರುವುದಕ್ಕೆ ಎರಡು ಕಾರಣಗಳಿವೆ. ಅ) ಅದು ಜಗಚ್ಚಕ್ರಪ್ರವರ್ತಕವಾದ ಯಜ್ಞದ ಅಂಗವಾಗಿದೆ. ಧಾನ್ಯಗಳು ಯಜ್ಞದ ಹವ್ಯ ವಸ್ತುಗಳು. ಆ ಧಾನ್ಯದ ಬೆಳೆಗೆ ಕಾರಣವಾದವು ಎತ್ತುಗಳು. ಅವು ಗೋವಿನಿಂದ ಬಂದಿರುತ್ತವೆ. ಹೀಗೆ ಪರಂಪರೆಯಾಗಿ ಗೋವು ಯಜ್ಞಕ್ಕೆ ಕಾರಣವಾಗಿದೆ[8]. ಬ) ಯಜ್ಞಕ್ಕೆ ಬೇಕಾದ ಹಾಲು, ಮೊಸರು, ತುಪ್ಪದ ನಿಧಿ ಗೋವು. ಕಾರಣ ಗೋವಿನ ಹೊರತು ಯಜ್ಞವೇ ಅಸಾಧ್ಯ[9].

ಈ ರೀತಿಯಾಗಿ ಗೋವುಗಳು ವೈಶಿಷ್ಟ್ಯಪೂರ್ಣವಾಗಿವೆಯೆಂಬುದನ್ನು ಮರೆಯಲಾಗದು.



---

(6) ಗಾವಃ ಸ್ವರ್ಗಸ್ಯ ಸೋಪಾನಂ ಗಾವಃ ಸ್ವರ್ಗೇಽಪಿ ಪೂಜಿತಾಃ ।
ಗಾವಃ ಕಾಮದುಹೋ ದೇವ್ಯೋ ನಾನ್ಯತ್ಕಿಂಚಿತ್ಪರಂ ಸ್ಮೃತಮ್ ॥

ಶ್ರೀಮನ್ಮಹಾಭಾರತ

(7) ಗೋಭಿಸ್ತುಲ್ಯಂ ನ ಪಶ್ಯಾಮಿ ಧನಂ ಕಿಂಚಿದಿಹಾಚ್ಯುತ ॥

ಶ್ರೀಮನ್ಮಹಾಭಾರತ

(8) ಏತಾಸಾಂ ತನಯಾಶ್ಚಾಪಿ ಕೃಷಿಯೋಗಂ ಉಪಾಸತೇ ।
ಜನಯಂತಿ ಚ ಧಾನ್ಯಾನಿ .... ತತೋ ಯಜ್ಞಾಃ ಪ್ರವರ್ತಂತೇ ॥

ಶ್ರೀಮನ್ಮಹಾಭಾರತ

(9) ಪಯೋದಧಿ ಘೃತಂ ಚೈವ ಪುಣ್ಯಾಶ್ಚೈವ ಸುರಾಧಿಪ ।
ಏತಾಭಿಶ್ಚ ವಿನಾ ಯಜ್ಞೋ ನ ವರ್ತೇತ ಕಥಂಚನ ॥

ಶ್ರೀಮನ್ಮಹಾಭಾರತ

# ಗೋಮೂತ್ರ, ಗೋಮಯಗಳಲ್ಲಿ ಲಕ್ಷ್ಮಿಯವಾಸ

ಒಮ್ಮೆ ಲಕ್ಷ್ಮೀದೇವಿಯು ಮನೋಹರವಾದ ರೂಪವನ್ನು ಧರಿಸಿ ಗೋವುಗಳಿರುವ ಕೊಟ್ಟಿಗೆಯನ್ನು ಪ್ರವೇಶಿಸಿದಳು. ಅವಳನ್ನು ಕಂಡು ಗೋವುಗಳಿಗೆ ಅಚ್ಚರಿಯಾಯಿತು. ನೀನಾರು ? ಎಲ್ಲಿಂದ ಬಂದಿರುವೆ ? ಕೇಳಿದವು.

ಲಕ್ಷ್ಮೀದೇವಿ ಹೇಳುತ್ತಾಳೆ - ಗೋವುಗಳೇ ನಿಮಗೆ ಮಂಗಳವಾಗಲಿ. ನಾನು ಶ್ರೀ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ. ನಾನು ಲೋಕದಲ್ಲಿ ಎಲ್ಲರಿಗೂ ಬೇಕಾದವಳು. ನಾನೀಗ ದೈತ್ಯರನ್ನು ತ್ಯಜಿಸಿ ಬಂದಿದ್ದೇನೆ. ನಾನಿಲ್ಲದೇ ದೈತ್ಯರು ನಷ್ಟರಾಗಿದ್ದಾರೆ. ನನ್ನ ಆಶ್ರಯದಿಂದ ಎಲ್ಲ ದೇವತೆಗಳು ಸುಖ, ಸಂಪತ್ತುಗಳನ್ನು ಹೊಂದಿದ್ದಾರೆ. ನಾನು ಯಾರನ್ನು ಪ್ರವೇಶಿಸುವೆನೋ ಅವರಿಗೆ ಸಿದ್ಧಿ, ನಾನು ಯಾರನ್ನು ತ್ಯಜಿಸುವೆನೋ ಅವರಿಗೆ ನಷ್ಟ, ಅವರ ವಿನಾಶ ನಿಶ್ಚಿತ. ನಾನೀಗ ನಿಮ್ಮಲ್ಲಿ ವಾಸಿಸಲು ಇಚ್ಛಿಸುತ್ತೇನೆ. ನೀವು ಸುಖ ಸಂಪನ್ನರಾಗಿರಿ .

ಆಗ ಗೋವುಗಳು ಲಕ್ಷ್ಮಿಯನ್ನು ಕುರಿತು "ನೀನು ಚಂಚಲೆ, ಎಲ್ಲಿಯೂ ಸ್ಥಿರವಾಗಿ ಇರುವವಳಲ್ಲ, ಕಾರಣ ನಿನಗೆ ಇಷ್ಟವಿದ್ದಲ್ಲಿಗೆ ಹೋಗಬಹುದು" ಎಂದವು[1]. ಈ ಮಾತಿಗೆ ಲಕ್ಷ್ಮಿಯು "ನಾನು ಸಾಧ್ವಿಯಾಗಿದ್ದೇನೆ. ಅತ್ಯಂತ ದುರ್ಲಭಳೂ ಆಗಿದ್ದೇನೆ. ಸ್ವಯಂ ಪ್ರೇರಿತಳಾಗಿ ಬಂದಿರುವ ನನಗೆ ಹೀಗೇಕೆ ಮಾತಾಡುತ್ತೀರಿ, ನಾನು ನಿಮ್ಮಲ್ಲಿರುವ ಪ್ರಭಾವದಿಂದ ಆಕರ್ಷಿತಳಾಗಿ ಬಂದಿರುವೆ. ಈಗಲೇ ನನ್ನನ್ನು ಸ್ವೀಕರಿಸಿರಿ " ಎಂದಳು.

ಮತ್ತೆ ಗೋವುಗಳು "ನೀನು ಅಶಾಶ್ವತಳೂ, ಚಂಚಲೆಯೂ ಆದ ಪ್ರಯುಕ್ತ ನಾವು ತ್ಯಾಗ ಮಾಡುತ್ತಿದ್ದೇವೆ. ನೀನು ಹೋಗಬಹುದು" ಎಂದವು.

ಲಕ್ಷ್ಮಿದೇವಿಯು ಗೋವುಗಳೇ ನಿಮಗೆ ಮಂಗಳವಾಗಲಿ. ನೀವು ನನಗೆ ಯಾವ ಅಂಗದಲ್ಲಿ ವಾಸಿಸಲು ಜಾಗಕೊಟ್ಟರೂ ಅಲ್ಲಿಯೇ ನಾನು ವಾಸಿಸುತ್ತೇನೆ ಎನ್ನಲು ಗೋವುಗಳು ಅವಳನ್ನು ಗೌರವಿಸಿ ನಮ್ಮ ಮೂತ್ರ, ಶಗಣಿಗಳಲ್ಲಿ ವಾಸ ಮಾಡು ಎಂದವು[2].

ಲಕ್ಷ್ಮಿಯು ಈ ಮಾತಿನಿಂದ ಪ್ರಸನ್ನಳಾಗಿ ನೀವು ಹೇಳಿದಂತೆ ನಾನು ಗೋಮಯ, ಗೋಮೂತ್ರಗಳಲ್ಲಿ ವಾಸಮಾಡಿಕೊಂಡಿರುತ್ತೇನೆ. ನಿಮ್ಮಿಂದ ನಾನು ಸತ್ಕೃತಳಾಗಿದ್ದೇನೆ. ನಿಮಗೆ ಮಂಗಳವಾಗಲಿ ಎಂದು ಹೇಳಿ ಅಲ್ಲಿಯೇ ಅಂತರ್ಧಾನಳಾದಳು.

ಇಂತಹ ಪವಿತ್ರವಾದ ಗೋವುಗಳು ಎಲ್ಲಿ ವಾಸಿಸುತ್ತವೆಯೋ ಆ ಸ್ಥಳವೂ ಕೂಡ ಅತ್ಯಂತ ಪವಿತ್ರವಾಗಿದೆ.



---

(1) ಅಧ್ರುವಾ ಚಪಲಾ ಚ ತ್ವಂ ಸಾಮಾನ್ಯಾ ಬಹುಭಿಃ ಸಹ ।
ನ ತ್ವಾಮಿಚ್ಛಾಮ ಭದ್ರಂ ತೇ ಗಮ್ಯತಾಂ ಯತ್ರ ರಂಸ್ಯಸೇ ॥
- ಶ್ರೀಮನ್‌ಮಹಾಭಾರತ

(2) ಅವಶ್ಯಂ ಮಾನನಾ ಕಾರ್ಯಾ ತವಾಸ್ಮಾಭಿರ್ಯಶಸ್ವಿನಿ ।
ಶಕೃನ್ಮೂತ್ರೇ ನಿವಸತ್ವಂ ಪುಣ್ಯಮೇತದ್ಧಿ ನಃ ಶುಭೇ ॥
- ಶ್ರೀಮನ್‌ಮಹಾಭಾರತ

# ಗೋಗ್ರಾಸ

ಗೋವುಗಳು ಪ್ರಪಂಚದಲ್ಲಿ ಸರ್ವಶ್ರೇಷ್ಠವಾದ, ಪೂಜ್ಯತಮವಾದ ಪ್ರಾಣಿಗಳಾಗಿವೆ. ಗೋವುಗಳಿಗೆ ಮಾಡಿದ ಸೇವೆಯು ಎಂದಿಗೂ ವ್ಯರ್ಥವಾಗುವುದಿಲ್ಲ. ಗೋವುಗಳನ್ನು ಕೃಪಾದೃಷ್ಟಿಯಿಂದ ನೋಡಿ ನಿತ್ಯದಲ್ಲಿ ಪ್ರಾತಸ್ಸಾಯಂಕಾಲಗಳಲ್ಲಿ ಅವುಗಳಿಗೆ ಗೋಗ್ರಾಸವನ್ನು ನೀಡಬೇಕು ಮತ್ತು ನಮಸ್ಕಾರವನ್ನು ಸಲ್ಲಿಸಬೇಕು. ಇದರಿಂದ ಮಾನವನಿಗೆ ಬಹು ಪುಣ್ಯ ಲಭಿಸುತ್ತದೆ.

ನಿತ್ಯದಲ್ಲಿ ಬ್ರಾಹ್ಮಣನು ಪೂಜಾ ಸಮಾಪ್ತಿಯ ನಂತರ ವೈಶ್ವದೇವ, ಬಲಿಹರಣಗಳನ್ನು ಮಾಡಿ (ಏಕಾದಶಿ ಹೊರತುಪಡಿಸಿ) ನಂತರ ತುಲಸೀ, ಭಾಗೀರಥಿ ಪೂಜೆಮಾಡಿ ನೈವೇದ್ಯಕೊಟ್ಟು (ಗೋವಿಗೆ) ಗೋಗ್ರಾಸ ಕೊಡಬೇಕು.

ಸುರಭೀ ವೈಷ್ಣವೀ ಮಾತಾ ನಿತ್ಯಂ ವಿಷ್ಣು ಪದಾಶ್ರಿತಾ ।

ಗೋಗ್ರಾಸಸ್ತು ಮಯಾದತ್ತಃ ಸುರಭಿಃ ಪ್ರತಿಗೃಹ್ಯತಾಂ ॥

ಈ ಶ್ಲೋಕವನ್ನು ಪಠಿಸಿ ಗವಾಂತರ್ಯಾಮಿ ಶ್ರೀಗೋಪಾಲಕೃಷ್ಣಃ ಪ್ರೀಯತಾಂ ಎಂದು ಹೇಳಬೇಕು.

ಗೋವಿಗೆ ನಿತ್ಯದಲ್ಲಿ ಒಂದು ಮುಷ್ಟಿ ಆಹಾರವನ್ನು ತಪ್ಪದೇಕೊಟ್ಟರೆ ಸ್ವರ್ಗ ಪ್ರಾಪ್ತಿ ಯಾಗುವದೆಂದು ಶ್ರೀ ಪದ್ಮಮಹಾಪುರಾಣದಲ್ಲಿ ತಿಳಿಸಿದ್ದಾರೆ.

ವಸು, ರುದ್ರ, ಆದಿತ್ಯರ ಸಂಬಂಧಿನಿಯಾದ ಗೋವಿಗೆ ಗೋಗ್ರಾಸವಿಡುವುದರಿಂದ ಪಿತೃಗಳಿಗೆ ತೃಪ್ತಿಯಾಗುತ್ತದೆ. ಪಿಂಡಪ್ರದಾನ ಕಾರ್ಯ ಮುಗಿದ ಮೇಲೆ ಗೋವಿಗೆ ಗ್ರಾಸವನ್ನು ಕೊಡಬೇಕು. ಶ್ರಾದ್ಧದಲ್ಲಿ ತೆಗೆದಿಟ್ಟ ಗೋಗ್ರಾಸವು ಅವುಗಳಿಗೆ ಮುಟ್ಟುವಂತೆ ಎಚ್ಚರವಹಿಸುವದು ಅವಶ್ಯವಾಗಿದೆ.

ಗ್ರಾಸಮುಷ್ಟಿಂ ಮಯಾ ದತ್ತಾಂ ಪ್ರತಿಗೃಹೀತ ಮಾತರ: ।

ಇತ್ಯಾದಿಭಿರ್ಮಂತ್ರವರ್ಯೈರ್ಗ್ರಾಸಂ ದತ್ವಾ ಪುನ: ಪುನ: ॥

ಗೋಪೂಜೆಯನ್ನು ಮಾಡಿದ ನಂತರ, ಗೋಮಾತೆಯೇ ! ನಾನು ಕೊಟ್ಟ ಈ ಗ್ರಾಸಮುಷ್ಟಿ ಯನ್ನು ಸ್ವೀಕರಿಸು ಎಂಬುದಾಗಿ ಪ್ರಾರ್ಥನೆ ಸಲ್ಲಿಸಿ ಗೋಗ್ರಾಸ ಕೊಡಬೇಕು.

ಎಲ್ಲ ಗೋವುಗಳು ನನ್ನ ತಾಯಿಯ ಸ್ಥಾನದಲ್ಲಿವೆ. ವೃಷಭಗಳು ನನ್ನ ತಂದೆಯ ಸ್ಥಾನದಲ್ಲಿವೆ. ನನ್ನಿಂದ ಕೊಡಲ್ಪಟ್ಟ ಗ್ರಾಸಮುಷ್ಟಿಯನ್ನು ಸ್ವೀಕರಿಸಿರಿ ಈ ಮಂತ್ರದಿಂದ ಅಥವಾ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ಗ್ರಾಸವನ್ನು ಕೊಟ್ಟಿದ್ದಾದರೆ, ಜ್ಞಾನ ಪೂರ್ವಕವಾಗಲಿ ಅಜ್ಞಾನಪೂರ್ವಕವಾಗಲಿ , ಮಾಡಿದ

ಎಲ್ಲ ಪಾಪಗಳು ನಾಶವಾಗುತ್ತವೆ. ದುಷ್ಟ ಸ್ವಪ್ನಗಳೂ ಕೂಡ ನಾಶಹೊಂದುತ್ತವೆ[1].

ಈಗ ಯಾರ ಮನೆಯಲ್ಲಿಯೂ ಆಕಳು ಇಲ್ಲವೇ ಇಲ್ಲ. ಈ ಕಾರಣದಿಂದ ಗೋಗ್ರಾಸ ಕೊಡುವದು ಸಾಧ್ಯವಿಲ್ಲವಾಗಿದೆ ಕಾರಣ ಗೋಗ್ರಾಸ ಕೊಡಲಿಚ್ಛಿಸುವವರು ತಮ್ಮ ಸಮೀಪದಲ್ಲಿರುವ ಗೋಶಾಲೆ, ಗೋಸಂರಕ್ಷಣಾ ಕೇಂದ್ರಗಳಿಗೆ ಗೋಗ್ರಾಸ ವನ್ನು ಹಣದ ರೂಪದಲ್ಲಿಯಾಗಲೀ, ಧಾನ್ಯದವಸಗಳ ರೂಪದಲ್ಲಿಯಾಗಲಿ ಕೊಟ್ಟು ಪುಣ್ಯಭಾಗಿಗಳಾಗಬೇಕು[2].



(1) ಗಾವೋ ಮೇ ಮಾತರಃ ಸರ್ವಾಃ ಪಿತರಶ್ಚೈವ ಗೋವೃಷಾಃ ।
ಗ್ರಾಸಮುಷ್ಟಿಂ ಮಯಾದತ್ತಂ ಪ್ರತಿಗೃಹ್ಣೀತ ಮಾತರಃ ॥
ಇತ್ಯುಕ್ತ್ವಾಽನೇನ ಮಂತ್ರೇಣ ಗಾಯತ್ರ್ಯಾವಾ ಸಮಾಹಿತಃ ॥
ಅಭಿಮಂತ್ರ್ಯ ಗ್ರಾಸಮುಷ್ಟಿಂ ತಸ್ಯ ಪುಣ್ಯ ಫಲಂ ಶೃಣು ॥
ಯತ್ಕೃತಂ ದುಷ್ಕೃತಂ ತೇನ ಜ್ಞಾನತೋಽಜ್ಞಾನತೋಽಪಿವಾ ।
ತಸ್ಯ ನಶ್ಯತಿ ತತ್ಸರ್ವಂ ದುಃಸ್ವಪ್ನಂ ಚ ವಿನಶ್ಯತಿ ॥ ಅಶ್ವಮೇಧಿಕಪರ್ವ

ಶ್ರೀಮನ್‌ಮಹಾಭಾರತ

(2) ಇತ್ತೀಚೆಗೆ ಶ್ರೀಮದುತ್ತರಾದಿ ಮಠದ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಶ್ರೀಯಲಗೂರ ಕ್ಷೇತ್ರದಲ್ಲಿ, ಶ್ರೀಮಳಖೇಡದ ಶ್ರೀ ಟೀಕಾರಾಯರ ಸನ್ನಿಧಾನದಲ್ಲಿ ಮತ್ತು ಬೆಂಗಳೂರಿನ ಶ್ರೀಮದುತ್ತರಾದಿಮಠದಲ್ಲಿ ಗೋಶಾಲೆಗಳನ್ನು, ಗೋ ಸಂರಕ್ಷಣಾ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಸದ್ಭಕ್ತರು ಗೋಗ್ರಾಸ ಕಾಣಿಕೆಗಳನ್ನು ಅಲ್ಲಿ ವಿನಿಯೋಗವಾಗುವಂತೆ ಸಲ್ಲಿಸಬಹುದು.

# ಗೋವಿನ ಅಂಗಗಳಲ್ಲಿ ದೇವತೆಗಳು

ಗೋವುಗಳು ಪರಮ ಪವಿತ್ರವಾದ ಪ್ರಾಣಿಗಳಾಗಿವೆ. ಗೋವುಗಳಲ್ಲಿ ಸರ್ವದೇವತೆಗಳು ವಾಸಿಸುತ್ತಾರೆ. ಗೋವುಗಳ ಯಾವ ಅಂಗಗಳಲ್ಲಿ ಯಾವ ದೇವತೆಗಳು ವಾಸಿಸುತ್ತಾರೆ ಎಂಬುದನ್ನು ಇಲ್ಲಿ ತಿಳಿಸಿಕೊಡಲಾಗಿದೆ.

ಗೋವುಗಳ ಕೋಡುಗಳಲ್ಲಿ ಇಂದ್ರ, ವಿಷ್ಣು ದೇವತೆಗಳು ವಾಸಿಸುತ್ತಾರೆ[1]. ಶಿರೋಭಾಗದಲ್ಲಿ ಬ್ರಹ್ಮದೇವರು, ಲಲಾಟ (ಹಣೆ)ದಲ್ಲಿ ರುದ್ರ ದೇವರು, ಕಿವಿಗಳಲ್ಲಿ ಅಶ್ವಿನೀ ದೇವತೆಗಳು, ಕಣ್ಣುಗಳಲ್ಲಿ ಸೂರ್ಯ ಚಂದ್ರರು ವಾಸಿಸುತ್ತಾರೆ[2].

ಹಲ್ಲುಗಳಲ್ಲಿ ಮರುದ್ದೇವತೆಗಳು, ನಾಲಿಗೆಯಲ್ಲಿ ಸರಸ್ವತೀ, ಕಂಠಭಾಗದಲ್ಲಿ ವರುಣದೇವರು, ಹೃದಯದಲ್ಲಿ ಹವ್ಯವಾಹನನಾದ ಅಗ್ನಿಯು[3], ಉದರದಲ್ಲಿ ಭೂದೇವಿಯು, ಹೆಗಲಿನಲ್ಲಿ ಆಕಾಶಾಭಿಮಾನಿದೇವತೆ, ಪೃಷ್ಠಭಾಗದಲ್ಲಿ ವೈವಸ್ವತ ಮನು ವಾಸಿಸುತ್ತಾರೆ[4].

ತೊಡೆಗಳಲ್ಲಿ ವಸುದೇವತೆಗಳು, ಮೊಣಕಾಲುಗಳಲ್ಲಿ ವಾಯುವು, ಬಾಲದ ಕೂದಲುಗಳಲ್ಲಿ ಆದಿತ್ಯರು, ಎಲ್ಲ ಅಂಗಗಳ ಸಂಧಿಗಳಲ್ಲಿ ಸಾಧ್ಯರು ವಾಸಿಸುತ್ತಾರೆ[5]. ಅಪಾನದಲ್ಲಿ ಎಲ್ಲ ತೀರ್ಥಗಳು, ಗೋಮೂತ್ರದಲ್ಲಿ ಗಂಗೆಯು, ಗೋಮಯ (ಶಗಣಿಯಲ್ಲಿ)ದಲ್ಲಿ ಧೃತಿ, ಪುಷ್ಟಿ ಹೆಸರಿನ ಮಹಾಲಕ್ಷ್ಮಿಯು ಯಾವಾಗಲೂ ವಾಸಿಸುತ್ತಾರೆ[6].

---

(1) ಏತಾಸಾಮುಗ್ರಶೃಂಗೇಷು ಇಂದ್ರವಿಷ್ಣೂಸ್ವಯಂ ಸ್ಥಿತೌ ॥

ಶ್ರೀಮನ್‌ಮಹಾಭಾರತ

(2) ಶಿರೋಬ್ರಹ್ಮಾ ಗುರುಃ ಸ್ಕಂಧೇ ಲಲಾಟೇ ವೃಷಭಧ್ವಜಃ ।
ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿ ಭಾಸ್ಕರೌ ॥

ಶ್ರೀಮನ್‌ಮಹಾಭಾರತ

(3) ದಂತೇಷು ಮರುತೋ ದೇವಾ ಜಿಹ್ವಾಯಾಂ ಚ ಸರಸ್ವತೀ ।
ಕಂಠೇಚ ವರುಣೋ ದೇವೋ ಹೃದಯೇ ಹವ್ಯವಾಹನಃ ॥

ಶ್ರೀಮನ್‌ಮಹಾಭಾರತ

(4) ಉದರೇ ಪೃಥಿವೀದೇವೀ ಸಶೈಲವನಕಾನನಾ ।
ಕಕುದಿ ದ್ಯೌಃ ಸನಕ್ಷತ್ರಾ ಪೃಷ್ಠೇ ವೈವಸ್ವತೋಮನುಃ ॥

ಶ್ರೀಮನ್‌ಮಹಾಭಾರತ

(5) ಊರ್ವೋಽಸ್ತು ವಸವೋದೇವಾ ವಾಯುರ್ಜಂಘೇ ಸಮಾಶ್ರಿತಃ ।
ಆದಿತ್ಯ ಸ್ತ್ವಾಶ್ರಿತೋ ವಾಲೇ ಸಾಧ್ಯಾಃ ಸರ್ವಾಂಗ ಸಂಧಿಷು ॥

(6) ಅಪಾನೇ ಸರ್ವತೀರ್ಥಾನಿ ಗೋಮೂತ್ರೇ ಜಾಹ್ನವಿ ಸ್ವಯಮ್ ।
ಧೃತಿಃ ಪುಷ್ಟಿರ್ಮಹಾಲಕ್ಷ್ಮೀ ಗೋಮಯೇ ಸಂಸ್ಥಿತಾ ಸದಾ ॥ ”

ಮೂಗಿನಲ್ಲಿ ಜ್ಯೇಷ್ಠಾ ದೇವಿಯು, ಗೋವಿನ ಸ್ತನಗಳಲ್ಲಿ ನಾಲ್ಕು ಸಮುದ್ರಗಳು ವಾಸಿಸುತ್ತವೆ[7]. ಖುರ ಮಧ್ಯದಲ್ಲಿ ಗಂಧರ್ವರು, ಖುರಾಗ್ರದಲ್ಲಿ ಪನ್ನಗರು, ಖುರಗಳ ಪಶ್ಚಿಮ ಭಾಗದಲ್ಲಿ ಅಪ್ಸರೆಯರು ವಾಸಿಸುತ್ತಾರೆ[8].

ಟೊಂಕ ಭಾಗದಲ್ಲಿ ಪಿತೃಗಳು ರೋಮಗಳನ್ನಾಶ್ರಯಿಸಿರುತ್ತಾರೆ. ರೋಮಕೂಪಗಳಲ್ಲಿ ಋಷಿಗಳು, ಚರ್ಮದಲ್ಲಿ ಪ್ರಜಾಪತಿಗಳು ವಾಸಿಸುತ್ತಾರೆ[9].

ಗೋವಿನ ಹುಂಕಾರದಲ್ಲಿ ನಾಲ್ಕು ವೇದಗಳು, ಹುಂ ಶಬ್ದದಲ್ಲಿ ಪ್ರಜಾಪತಿಯು ಇರುತ್ತಾರೆ. ಹೀಗೆ ವಿಷ್ಣುಮಯವಾದ ಗೋವಿನ ದೇಹದಲ್ಲಿ ಎಲ್ಲ ದೇವತೆಗಳಿದ್ದು ಶ್ರೀಕೇಶವರೂಪಿ ಭಗವಂತನು ರಕ್ಷಿಸುತ್ತಾನೆ[10].

ಹೀಗೆ ಎಲ್ಲ ದೇವತೆಗಳ ವಾಸಸ್ಥಾನವಾದ ಗೋವನ್ನು ನೋಡಿ ನಮಸ್ಕಾರ ಮಾಡಿ, ಪ್ರದಕ್ಷಿಣೆ ಹಾಕಿದರೆ ಏಳು ದ್ವೀಪಗಳಿಂದ ಕೂಡಿದ ಭೂಮಿ ಪ್ರದಕ್ಷಿಣೆ ಮಾಡಿದ ಫಲ ಬರುತ್ತದೆ[11].



---

(7) ನಾಸಿಕಾಯಾಂ ಚ ಶ್ರೀದೇವಿ ಜ್ಯೇಷ್ಠಾ ವಸತಿ ಭಾಮಿನಿ ।
ಚತ್ವಾರಃ ಸಾಗರಾಃ ಪೂರ್ಣಾ ಗವಾಂ ಹ್ಯೇವ ಪಯೋಧರೇ ॥

(8) ಖುರ ಮಧ್ಯೇಷು ಗಂಧರ್ವಾಃ ಖುರಾಗ್ರೇ ಪನ್ನಗಾಃಶ್ರಿತಾಃ ।
ಖುರಾಣಾಂ ಪಶ್ಚಿಮೇ ಭಾಗೇ ಹ್ಯಪ್ಸರಾಣಾಂ ಗಣಾಃಸ್ಮೃತಾಃ ॥)

ಶ್ರೀಮನ್‌ಮಹಾಭಾರತ

(9) ಶ್ರೋಣೀತಟೇಷು ಪಿತರೋ ರೋಮಲಾಂಗೂಲಮಾ ಶ್ರಿತಾಃ ॥
ಋಷಯೋ ರೋಮಕೂಪೇಷು ಚರ್ಮಣ್ಯೇವ ಪ್ರಜಾಪತಿಃ ॥

ಶ್ರೀಮನ್‌ಮಹಾಭಾರತ

(10) ಹುಂಕಾರೇ ಚತುರೋ ವೇದಾಃ ಹುಂಶಬ್ದೇ ಚ ಪ್ರಜಾಪತಿಃ ।
ಏವಂ ವಿಷ್ಣುಮಯಂ ಗಾತ್ರಂ ತಾಸಾಂ ಗೋಪ್ತಾ ಸ ಕೇಶವಃ ॥

ಶ್ರೀಮನ್‌ಮಹಾಭಾರತ

(11) ಗವಾಂ ದೃಷ್ಟ್ವಾ ನಮಸ್ಕೃತ್ಯ ಕೃತ್ವಾ ಚೈವ ಪ್ರದಕ್ಷಿಣಮ್ ।
ಪ್ರದಕ್ಷಿಣೀ ಕೃತಾ ತೇನ ಸಪ್ತದ್ವೀಪಾ ವಸುಂಧರಾ ॥

ಶ್ರೀಮನ್‌ಮಹಾಭಾರತ

# ವಸಿಷ್ಠರ ಹೋಮಧೇನು ನಂದಿನಿಯ ಮಹಿಮೆ

ಕಾನ್ಯಕುಬ್ಜ ದೇಶದಲ್ಲಿ ಗಾಧಿ ಎಂಬ ಲೋಕ ಪ್ರಸಿದ್ಧ ಮಹಾರಾಜನಿದ್ದ. ಈ ಗಾಧಿಯ ಪುತ್ರನೇ ವಿಶ್ವಾಮಿತ್ರನು. ವಿಶ್ವಾಮಿತ್ರನೊಮ್ಮೆ ಅಮಾತ್ಯರಿಂದ ಕೂಡಿದವನಾಗಿ ಗಹನವಾದ ಅರಣ್ಯದಲ್ಲಿ ಬೇಟೆಯಾಡುತ್ತ ಸುತ್ತಾಡಿ ಬಹಳ ಆಯಾಸಗೊಂಡನು. ತನ್ನ ಆಯಾಸವನ್ನು ಪರಿಹರಿಸಿಕೊಳ್ಳಲು ಸಮೀಪದಲ್ಲಿದ್ದ ವಸಿಷ್ಠರ ಆಶ್ರಮಕ್ಕೆ ಬಂದನು.

ವಸಿಷ್ಠರು ನರಶ್ರೇಷ್ಠನಾದ ವಿಶ್ವಾಮಿತ್ರನನ್ನು ಆದರ ಪೂರ್ವಕವಾಗಿ ಸ್ವಾಗತಿಸಿದರು. ವಸಿಷ್ಠರು ಅವನಿಗೆ ಪಾದ್ಯ, ಅರ್ಘ್ಯ ಆಚಮನೀಯಗಳನ್ನಿತ್ತು ಸತ್ಕರಿಸಿ ಗಡ್ಡೆ, ಗೆಣಸು, ಫಲಗಳನ್ನು ಕೊಟ್ಟು ಸಂತೋಷಪಡಿಸಿದರು.

ವಸಿಷ್ಠರ ಹತ್ತಿರ ನಂದಿನೀ ಎಂಬ ಆಕಳವಿತ್ತು. ಅದು ಕೊಡಲಾಗದ ವಸ್ತುವೇ ಪ್ರಪಂಚದಲ್ಲಿರಲಿಲ್ಲ. ಅದು ಹಣ್ಣು ಹಂಪಲುಗಳಲ್ಲದೇ ಷಡ್ರಸಾನ್ನ, ಭಕ್ಷ್ಯ-ಭೋಜ್ಯಗಳನ್ನು ಕೊಡುತ್ತಿತ್ತು. ಅವೆಲ್ಲವೂ ಅಮೃತಕ್ಕೆ ಸಮನಾಗಿದ್ದವು. ಅಷ್ಟೇ ಅಲ್ಲ ಅದು ರತ್ನಹಾರ, ದಿವ್ಯಾಂಬರಗಳನ್ನು ಕೊಡುತ್ತಿತ್ತು.

ವಸಿಷ್ಠರು ವಿಶ್ವಾಮಿತ್ರನ ಮಂತ್ರಿ ಸೇವಕರು ಮೊದಲಾದವರಿಗೆ ಎಲ್ಲ ರೀತಿಯ ಭಕ್ಷ್ಯ ಭೋಜ್ಯಾದಿಗಳನ್ನಿತ್ತು, ರತ್ನದ ಹಾರಾದಿಗಳನ್ನು ಕೂಡ ಕೊಟ್ಟು ಸತ್ಕಾರ ಮಾಡಿದರು.

ವಿಶ್ವಾಮಿತ್ರನು ವಸಿಷ್ಠರ ಆತಿಥ್ಯದಿಂದ ತೃಪ್ತನಾದನು. ವಸಿಷ್ಠರ ಕಾಮಧೇನು ನಂದಿನಿಯನ್ನು ನೋಡಿ ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು. ಅದು ಸರ್ವ ಲಕ್ಷಣಭರಿತವಾಗಿತ್ತು, ನಯನ ಮನೋಹರವಾಗಿತ್ತು.

ವಿಶ್ವಾಮಿತ್ರನು ನಂದಿನಿಯನ್ನು ಹತ್ತು ಸಾವಿರ ಗೋವುಗಳ ವಿನಿಮಯ ಮಾಡಿಕೊಂಡು ತನಗೆ ಕೊಡಬೇಕೆಂದು ವಸಿಷ್ಠರನ್ನು ಕೇಳಿದ. ಅಷ್ಟೇ ಅಲ್ಲ ತಾನು ಆಳುತ್ತಿದ್ದ ರಾಜ್ಯವನ್ನಾದರೂ ತೆಗೆದುಕೊಂಡು ನಂದಿನಿಯನ್ನು ಕೊಡಬೇಕೆಂದು ಕೇಳಿಕೊಂಡ.

ವಸಿಷ್ಠರಿಗೆ ಹತ್ತು ಸಾವಿರ ಏಕೆ? ಹತ್ತು ಕೋಟಿ ಆಕಳುಗಳನ್ನು ಕೊಟ್ಟರೂ ಅವರು ನಂದಿನಿಯನ್ನು ಕೊಡಲು ಇಷ್ಟಪಡಲಿಲ್ಲ. ವಿಶ್ವಾಮಿತ್ರನು ತನಗೆ ಪ್ರಿಯವಾದ ವಸ್ತುವನ್ನು ಕೇಳಿದನೆಂದು ಕೋಪ ಹೊಂದಲಿಲ್ಲ.

ವಿಶ್ವಾಮಿತ್ರನನ್ನು ಕುರಿತು ವಶಿಷ್ಠರು - "ಪಾಪರಹಿತನೇ! ದೇವತೆಗಳ ಪೂಜೆ, ಅತಿಥಿ ಸತ್ಕಾರ, ಪಿತೃಕಾರ್ಯಕ್ಕಾಗಿ ಮತ್ತು ಯಜ್ಞ ಹೋಮಾದಿಗಳ ಸಲುವಾಗಿ ಈ ನಂದಿನಿಯನ್ನು ಕಾಪಾಡುತ್ತಿರುವೆನು. ಕಾರಣ ನಿನ್ನ ಸಾಮ್ರಾಜ್ಯವನ್ನೇ ಕೊಡುವುದಾದರೂ ನಾನು ನಂದಿನಿಯನ್ನು ಕೊಡಲಾರೆ" ಎಂದರು.

ವಿಶ್ವಾಮಿತ್ರನು ಅಟ್ಟಹಾಸದಿಂದ ನಕ್ಕು, ವಸಿಷ್ಠರ ಮೇಲೆ ಕೋಪದಿಂದ ವೀರಕ್ಷತ್ರಿಯನ ಮಾತನ್ನು ತಿರಸ್ಕರಿಸಿ, ನಂದಿನಿಯನ್ನು ಕೊಡಲು ಒಪ್ಪುತ್ತಿಲ್ಲ. ನಾನು ಮಾತ್ರ ಅದನ್ನು ಬಿಟ್ಟು ಹೋಗುವುದಿಲ್ಲ ಎಂದು ಹೇಳುತ್ತ ಬಲಾತ್ಕಾರವಾಗಿ ನಂದಿನಿಯನ್ನು ಸೆಳೆದುಕೊಂಡು ಹೋಗಲು ಪ್ರಯತ್ನಿಸಿದರು. ವಸಿಷ್ಠರು ಬ್ರಹ್ಮಸ್ವ ಅಪಹಾರ ಸಲ್ಲದೆಂದು ತಿಳಿಸಿದರೂ ವಿಶ್ವಾಮಿತ್ರನು ಕೇಳದೇ, ವಿವೇಚನೆ ಇಲ್ಲದೇ ಸೆಳೆಯುತ್ತಿರಲು ನಂದಿನಿಯು ವಿಶ್ವಾಮಿತ್ರನ ವಶಳಾಗಲಿಲ್ಲ. ಆಗ ಚಾವಟಿಯಿಂದ ಹೊಡೆಯುತ್ತಿರಲು ಅಂಬಾ ಎಂದು ಕೂಗುತ್ತ ಓಡಿಬಂದು ವಸಿಷ್ಠರ ಎದುರು ನಿಂತುಕೊಂಡಿತು. ನಂದಿನಿಯ ಅವಸ್ಥೆಯನ್ನು ನೋಡಿ ವಸಿಷ್ಠರ ಕಣ್ಣಲ್ಲಿ ನೀರು ಬಂದು, ನಂದಿನಿಯ ಮೈಸವರುತ್ತಾ ಮಗಳೇ ! ನೀನು ಕೂಗಿ ಕೊಳ್ಳುವುದನ್ನು ಕೇಳುತ್ತಲಿದ್ದರೂ ವಿಶ್ವಾಮಿತ್ರನು ಬಲಾತ್ಕಾರವಾಗಿ ನಿನ್ನನ್ನು ಸೆಳೆದೊಯ್ಯುತ್ತಲಿದ್ದಾನೆ. ನಾನು ಕ್ಷಮಾಪರ ಬ್ರಾಹ್ಮಣನಾಗಿದ್ದೇನೆ. ನಾನು ಕ್ಷಮೆಯನ್ನು ತ್ಯಜಿಸಲಾರೆ, ನೀನು ನಿನಗಿಚ್ಛೆಯಿದ್ದರೆ ಅವನೊಡನೆ ಹೋಗಬಹುದು ಎಂದರು. ಆಗ ನಂದಿನಿಯು ಮಹರ್ಷಿಗಳೇ ನನ್ನನ್ನು ತ್ಯಜಿಸಲು ಸಿದ್ಧರಿರುವಿರಾ? ಎಂದಾಗ ಮಗಳೇ ನಿನ್ನನ್ನು ನಾನು ತ್ಯಜಿಸಲಾರೆ ನೀನು ನನ್ನಲ್ಲಿ ಇರಬಹುದು ಎಂದರು.

ಆಗ ನಂದಿನಿಯು ಕೆಂಪು ಕಣ್ಣು ಮಾಡಿ ಸಿಟ್ಟಿನಿಂದ ಗರ್ಜನೆ ಮಾಡುತ್ತ ಅವಳನ್ನು ಹಿಡಿಯಬೇಕೆಂದು ಬರುತ್ತಿರುವ ಸೈನ್ಯವನ್ನು ಮರ್ದನ ಮಾಡಲಾರಂಭಿಸಿದಳು. ಅವಳ ಬೇರೆ ಬೇರೆ ಅವಯವಗಳಿಂದ ಅನೇಕ ಸೈನ್ಯಗಳು ಹೊರಬಂದವು ಬಾಲದಿಂದ ಕಾದ ಕೆಂಡಗಳು ಎರಚಲ್ಪಟ್ಟವು. ವಿಶ್ವಾಮಿತ್ರನು ನೋಡುತ್ತಿದ್ದಂತೆಯೇ ಅವನ ಸೈನಿಕರು ದಿಕ್ಕಾಪಾಲಾಗಿ ಓಡಹತ್ತಿದರು. ನಂದಿನಿಯು ವಿಶ್ವಾಮಿತ್ರನ ನಿರ್ಗಮನದಲ್ಲಿ ಆಸಕ್ತಳಾಗಿದ್ದಳು. ವಸಿಷ್ಠರ ತಪೋವನವನ್ನು ಹೆಣಗಳ ರಾಶಿಯಿಂದ ಅಪವಿತ್ರ ಮಾಡುವ ಇಚ್ಛೆ ಅವಳಿಗಿರಲಿಲ್ಲ. ಕಾರಣ 27 ಮೈಲಿ ದೂರ ಎಲ್ಲರನ್ನು ಓಡಿಸಿ ಬಿಟ್ಟಳು. ಅವರಿಗೆ ರಕ್ಷಕರೇ ಇರಲಿಲ್ಲ. ವಿಶ್ವಾಮಿತ್ರನಿಗೆ ಆಶ್ಚರ್ಯವುಂಟಾಗಿ ಮರು ಮಾತನಾಡದೇ ನಂದಿನಿಯನ್ನು ಬಿಟ್ಟು ಹೊರಟು ಹೋದನು. ನಂದಿನಿಯ ಹಿರಿಮೆ ಜಗತ್ತಿಗೇ ಆಶ್ಚರ್ಯವನ್ನುಂಟುಮಾಡಿತ್ತು.



# ವೇದಗಳಲ್ಲಿ ಗೋವು

'ಗಾವೋ ಹ ಜಜ್ಞಿರೇ ತಸ್ಮಾತ್' (ಪುರುಷ ಸೂಕ್ತ) ಉಕ್ತಿಯಂತೆ ಗೋವುಗಳು ಆ ಪುರುಷ ರೂಪೀ ಭಗವಂತನಿಂದ ಹುಟ್ಟಿದವು.

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ ಅಮೃತಸ್ಯನಾಭಿಃ ।
ಪ್ರನು ವೋಚಂ ಚಿಕಿತುಷೇ ಜನಾಯ ಮಾ ಗಾಮನಾಗಾಂ ಅದಿತಿಂ ವಧಿಷ್ಟ॥

(ಋಕ್‌ಸಂಹಿತಾ 8-101-18)

ಏಕಾದಶರುದ್ರರಿಗೆ ಮಾತೆಯು, ಅಷ್ಟವಸುಗಳಿಗೆ ಪುತ್ರಿಯು, ದ್ವಾದಶಾದಿತ್ಯರಿಗೆ ಸಹೋದರಿಯು, ಅಮೃತಕ್ಕೆ ಉತ್ಪತ್ತಿಸ್ಥಾನಳು, ರೋಗರಹಿತಳು (ಸರ್ವದಾ ಶುದ್ಧಳು) ಗೋಸ್ವರೂಪಿಣಿಯಾಗಿರುವ, ತೇಜೋವಂತೆಯಾದ ಆ ಅದಿತಿದೇವತೆಯನ್ನು ಹಿಂಸೆ ಮಾಡಬೇಡಿರಿ.

ಗವಾಂ ಮಧ್ಯೇ ಗಾವೋಯತ್ರ ಭೂರಿ ಶೃಂಗಾ ಅಯಾಸಃ ।
ಅತ್ರಾಹ ತದುರುಗಾಯಸ್ಯ ವಿಷ್ಣೋಃ ಪರಮಂ ಪದಂ ಅವಭಾತಿಭೂರೇಃ॥

(ಋಕ್ ಸಂಹಿತಾ 1-154-6)

ಎಲ್ಲಿ ಬಲಿಷ್ಠವಾದ ಕೊಂಬುಗಳುಳ್ಳ ಚುರುಕಾದ ಗೋವುಗಳು ಇವೆಯೋ, ಅಲ್ಲಿ ಗೋವುಗಳ ಮಧ್ಯದಲ್ಲಿ ಮಹಾಗತಿಯನ್ನುಳ್ಳ, ಸ್ತೋತ್ರಪ್ರಿಯನಾದ, ಮಹಾವಿಭೂತಿಯಾದ ಶ್ರೀ ವಿಷ್ಣುವಿನ ಪರಮ ಪದವು ಪ್ರಕಾಶಿಸುತ್ತದೆ.

ಅಥರ್ವಣವೇದವು ಗೋವಿನ ಆರು ಜಾತಿಗಳನ್ನು ಗುರುತಿಸಿರುವುದು ಕಂಡು ಬರುತ್ತದೆ.

1) ವಿಲಿಪ್ತಿ : ತುಪ್ಪ ಹಚ್ಚಿರುವಂತೆ ಹೊಳೆಯುವ ಮೈಬಣ್ಣವುಳ್ಳದ್ದು.
2) ಸೂತವಶಾ : ಸೇವಕನಿಗೂ ಸೌಮ್ಯವಾಗಿರುವುದು.
3) ವಶಾ : ಅತ್ಯಂತ ಸಾಧುವಾಗಿರುವುದು.
4) ವಶಾನಾಂವಶತಮಾ : ಹೆಚ್ಚು ಹಾಲು ಹಿಂಡುವ, ಯಾವ ಕಾಲದಲ್ಲೂ ಯಾರು ಹಿಂಡಿದರೂ ತೊಂದರೆ ಮಾಡದ ಸ್ವಭಾವವುಳ್ಳದ್ದು.
5) ಭೀಮಾ : ಭಯಾನಕ ರೂಪವುಳ್ಳದ್ದು.
6) ಅವಶಾ : ನಿರಂಕುಶವಾಗಿದ್ದು ಹಾಲು ಕರೆಯಲು ವಿಘ್ನಮಾಡುವಂತಹುದು.

ಇವುಗಳಲ್ಲಿ ಮೊದಲಿನ ನಾಲ್ಕು ಜಾತಿಯ ಗೋವುಗಳು ದಾನಯೋಗ್ಯವಾಗಿವೆ. ಉಳಿದ ಕೊನೆಯವೆರಡು ದಾನಯೋಗ್ಯವಲ್ಲವೆಂದು ತಿಳಿಯಬೇಕು.

ಗಾವಃ ಸುರಭಿಗಂಧಿನ್ಯಸ್ತಥಾ ಗುಗ್ಗುಲಗಂಧಯಃ ।
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಮಹತ್ ॥
ಅನ್ನಂ ಹಿ ಪರಮಂ ಗಾವೋ ದೇವಾನಾಂ ಪರಮಂ ಹವಿಃ ।
ಸ್ವಾಹಾಕಾರ ವಷಟ್‌ಕಾರೌ ಗೋಷು ನಿತ್ಯಂ ಪ್ರತಿಷ್ಠಿತಾಃ ॥
ಗಾವೋ ಯಜ್ಞಸ್ಯಹಿ ಫಲಂ ಗೋಷು ಯಜ್ಞಾಃ ಪ್ರತಿಷ್ಠಿತಾಃ ॥
ಗಾವೋ ಭವಿಷ್ಯಂ ಭೂತಂ ಚ ಗೋಷು ಯಜ್ಞಾಃ ಪ್ರತಿಷ್ಠಿತಾಃ ॥

ಕೆಲವು ಗೋವುಗಳ ಶರೀರದಿಂದ ಮನೋಹರವಾದ ಸುಗಂಧವೂ, ಕೆಲವು ಗೋವುಗಳಲ್ಲಿ ಗುಗ್ಗುಲಾದಿಗಳ ಸುಗಂಧದಂತೆ ವಾಸನೆ ಬರುತ್ತದೆ. ಗೋವುಗಳು ಸರ್ವ ಜೀವರಾಶಿಗಳ ಆಧಾರವೂ, ಅತ್ಯಂತ ಮಂಗಳಕರ ನಿಧಿಯೂ ಆಗಿವೆ. ಸರ್ವೋತ್ಕೃಷ್ಟ ಹಾಲನ್ನು ನೀಡುವ ಗೋವು ದೇವತೆಗಳ ಹವಿಸ್ಸನ್ನು ಕೊಡುವಂತಹದಾಗಿದೆ. ಸ್ವಾಹಾಕಾರ, ವಷಟ್‌ಕಾರ, ಸ್ವಧಾಕಾರಗಳೆಲ್ಲವೂ ಗೋವನ್ನೇ ಆಶ್ರಯಿಸಿವೆ. ಯಜ್ಞದ ಫಲವನ್ನು ಗೋವುಗಳೇ ಕೊಡುತ್ತವೆ. ಗೋವುಗಳಲ್ಲಿ ಯಜ್ಞವು ಆಶ್ರಯ ಹೊಂದಿದೆ. ಭೂತ ಭವಿಷ್ಯತ್ ಯಜ್ಞಗಳೆಲ್ಲವೂ ಗೋವನ್ನೇ ಆಶ್ರಯಿಸಿವೆ. ಅಂದರೆ ಯಜ್ಞಕ್ಕೆ ಬೇಕಾಗುವ ತುಪ್ಪ ಗೋವಿನಿಂದ ಬಂದಿದೆ. ತುಪ್ಪದಿಂದ ಮಾಡಿದ ಯಜ್ಞ ಮಳೆಬೆಳೆಗೆ ಕಾರಣ. ಮಳೆಬೆಳೆಗಳಿಂದ ಸರ್ವ ಪ್ರಾಣಿಗಳ ಜೀವನ ಸಾಗುತ್ತದೆ. ಆದ್ದರಿಂದ ವೇದಗಳು ಜಗತ್ತಿಗೆ ಗೋವು ಆಶ್ರಯವೆಂದು ಸಾರುತ್ತಿವೆ.



# ವೇದ, ಪುರಾಣ, ಶಾಸ್ತ್ರಗಳಲ್ಲಿ ಗೋವಿನ ಉಪಮೆಗಳು

ನಮ್ಮ ಭಾರತೀಯ ಆರ್ಷಗ್ರಂಥಗಳಲ್ಲಿ ಗೋವಿನ ಉಪಮೆಯನ್ನು ಕೊಟ್ಟು ಅನೇಕ ವಿಷಯಗಳನ್ನು ತಿಳಿಸಿಕೊಟ್ಟಿರುವುದು ಕಂಡು ಬರುತ್ತದೆ. ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ.

**1) ವೇದದಲ್ಲಿ :**

ಸುರೂಪಕೃತ್ನುಮೂತಯೇ ಸುದುಘಾಮಿವ ಗೋದುಹೇ ॥
ಜುಹೂಮಸಿ ದ್ಯವಿ ದ್ಯವಿ ॥ (ಋಗ್ವೇದ 1-4-1)

ಪುಷ್ಟಿದಾಯಕವಾದ, ಪೂರ್ಣ ಆಹಾರವಾದ ಕೆನೆಹಾಲು, ಮೊಸರು, ಬೆಣ್ಣೆ, ತುಪ್ಪಗಳ ಸಲುವಾಗಿ ಉತ್ಕೃಷ್ಟವಾದ ಹಾಲನ್ನು ಕರೆದುಕೊಡುವ ಗೋವನ್ನೇ ಆಶ್ರಯಿಸುವಂತೆ ಆಧ್ಯಾತ್ಮಿಕಾದಿ ಅಭೀಷ್ಟಸಿದ್ಧಿಗಾಗಿ, ರಕ್ಷಣೆಗಾಗಿ ನಾವು ದಿನದಿನವೂ ಸಮರ್ಥನಾದ ಆ ಭಗವಂತನನ್ನು ಸ್ತೋತ್ರ ಮಾಡುತ್ತೇವೆ.

**2) ಉಪನಿಷತ್ತುಗಳಲ್ಲಿ :**

ವಾಚಂ ಧೇನುಮುಪಾಸೀತ । ತಸ್ಯಾಶ್ಚತ್ವಾರಃ ಸ್ತನಾಃ । ಸ್ವಾಹಾಕಾರೋ ವಷಟ್ಕಾರೋ ಹಂತಕಾರಃ ಸ್ವಧಾಕಾರಃ । ತಸ್ಯೈದ್ವೌಸ್ತನೌ ದೇವಾ ಉಪಜೀವಂತಿ । ಸ್ವಾಹಾಕಾರಂ ಚ ವಷಟ್ಕಾರಂ ಚ । ಹಂತಕಾರಂ ಮನುಷ್ಯಾಃ । ಸ್ವಧಾಕಾರಂ ಪಿತರಃ । ತಸ್ಯಾಃ ಪ್ರಾಣ ಋಷಭೋ, ಮನೋ ವತ್ಸಃ ॥

(ಬೃಹದಾರಣ್ಯಕ, ದಶಮಬ್ರಾಹ್ಮಣಮ್)

ಗೋರೂಪದಲ್ಲಿ ವಾಗ್ದೇವಿ ಸರಸ್ವತಿಯನ್ನು ಉಪಾಸನೆ ಮಾಡಬೇಕು. ಹೇಗೆಂದರೆ ಆ ಧೇನುವಿಗೆ ಸ್ವಾಹಾಕಾರ, ವಷಟ್ಕಾರ, ಹಂತಕಾರ ಮತ್ತು ಸ್ವಧಾಕಾರ ಎಂಬ ನಾಲ್ಕು ಸ್ತನಗಳಿವೆ. ಸ್ವಾಹಾಕಾರ ಮತ್ತು ವಷಟ್ಕಾರ ಎಂಬ ಎರಡು ಸ್ತನಗಳನ್ನು ದೇವತೆಗಳು ಆಶ್ರಯಿಸಿದ್ದಾರೆ. ಹಂತಕಾರ ಎಂಬ ಸ್ತನವನ್ನು ಮನುಷ್ಯರು ಆಶ್ರಯಿಸಿದ್ದಾರೆ. ಪಿತೃಗಳು ಸ್ವಧಾಕಾರವೆಂಬ ಸ್ತನವನ್ನು ಆಶ್ರಯಿಸಿದ್ದಾರೆ. ವಾಯುದೇವರು ಅವಳಿಗೆ ಪತಿ, ರುದ್ರದೇವರು ಕರು, ಎಂಬುದಾಗಿ ತಿಳಿಯಬೇಕು.

**3) ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ :**

ಯಥಾ ಶೌಕ್ಲ್ಯಾದಿಕಂ ರೂಪಂ ಗೋರ್ಭವತ್ಯೇವ ಸರ್ವದಾ ।
ಸುಖ ಜ್ಞಾನಾದಿಕಂ ರೂಪಮೇವಂ ಭಕ್ತೇರ್ನಚಾನ್ಯಥಾ ॥ (1-113)

ಶುಕ್ಲತ್ವ ಮೊದಲಾದವುಗಳು ಹೇಗೆ ಗೋವಿನ ಸ್ವರೂಪವೇ ಆಗಿವೆಯೋ ಹಾಗೆ ಸುಖ ಜ್ಞಾನಾದಿಗಳು ಸರ್ವದಾ ಭಕ್ತಿಯ ಸ್ವರೂಪವೇ ಆಗಿವೆ. ಬೇರೆ ರೀತಿಯಾಗಿ ಅಲ್ಲ.

**4) ಶ್ರೀಮನ್ನ್ಯಾಯಸುಧೆಯಲ್ಲಿ (ಅನಾವಿಷ್ಕಾರಾಧಿಕರಣಮ್) :**

ಪ್ರತಿಗ್ರಹೀತುಃ ಶಿಷ್ಯಸ್ಯ ಜ್ಞಾನ ಫಲಾದಪ್ಯಾಚಾರ್ಯಸ್ಯ ಜ್ಞಾನದಾನಫಲಮಧಿಕ ಮಿತ್ಯೇತದ್ಯುಕ್ತಿ ಸಿದ್ಧಂಚ । ತಾಂ ಯುಕ್ತಿಂ ಸೂಚಯತಿ । ನೇತಿ ॥ ಅನುವ್ಯಾಖ್ಯಾನ - ನ ಗೋದಾತಾ ಗೋಮಾತ್ರ ಫಲಮಾಪ್ನುಯಾತ್ ।

ಪ್ರತಿಗ್ರಹೀತುರ್ಹಿ ಗೋ ಮಾತ್ರ ಫಲಮ್ । ಗೋದಾತಾ ನ ಗೋಮಾತ್ರ ಫಲವಾನ್ ಭವತಿ । ಕಿಂತು ಮಹಾಫಲಂ ಸ್ವರ್ಗಾದಿಕಂ ಚ ಪ್ರಾಪ್ನೋತಿ । ಯಥೈತತ್ತಥಾ ಪ್ರಕೃತೇಽಪೀತ್ಯರ್ಥಃ । ಅಯಮತ್ರ ಪ್ರಯೋಗಃ । 'ಜ್ಞಾನದಾತಾ ದತ್ತ ವಸ್ತು ಫಲಾದಪ್ಯಧಿಕ ದಾನ ಫಲವಾನ್ ಪುರುಷಾರ್ಥ ಹೇತು ವಸ್ತುದಾತೃತ್ವಾದ್ ಗೋದಾತೃವತ್ ಇತಿ ॥'

ಗುರೂಪದೇಶ ಪಡೆಯುವ ಶಿಷ್ಯನ ಜ್ಞಾನಫಲಕ್ಕಿಂತ ಗುರುವಿನ ಜ್ಞಾನದಾನದ ಫಲವು ಹೆಚ್ಚಾದುದು ಎಂಬುದು ಯುಕ್ತಿ ಸಿದ್ಧವೂ ಆಗಿದೆ. ಆ ಯುಕ್ತಿಯನ್ನು ನ ಗೋದಾತಾ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳುತ್ತಾರೆ.

ಗೋವನ್ನು ದಾನ ಮಾಡಿದವನು ಜನ್ಮಾಂತರದಲ್ಲಿ ಗೋವನ್ನು ಎಂಬ ಫಲವನ್ನು ಮಾತ್ರ ಪಡೆಯುತ್ತಾನೆ ಎಂದಲ್ಲ ಅಧಿಕವಾದ ಸ್ವರ್ಗಾದಿ ಫಲವನ್ನೂ ಪಡೆಯುತ್ತಾನೆ.

ಗೋದಾನವನ್ನು ಸ್ವೀಕರಿಸಿದವನಿಗೆ ಕೇವಲ ಗೋವು ಫಲವಾಗಿದೆ. ಅದಕ್ಕಿಂತ ಹೆಚ್ಚಿನದಲ್ಲ. ಅದರೆ ಗೋದಾನ ಮಾಡಿದವನು ಕೇವಲ ಗೋ ಮಾತ್ರ ಫಲವುಳ್ಳವನು ಆಗುವುದಿಲ್ಲ. ಆದರೆ ಶ್ರೇಷ್ಠಫಲವಾದ ಸ್ವರ್ಗಾದಿಗಳನ್ನು ಕೂಡ ಹೊಂದುತ್ತಾನೆ. ಇದು ಹೇಗೋ ಅದರಂತೆ ಜ್ಞಾನದ ವಿಷಯದಲ್ಲಿಯೂ. ಜ್ಞಾನವನ್ನು ದಾನ ಮಾಡತಕ್ಕವನು ದಾನ ಸ್ವೀಕರ್ತೃವಿಗೆ ದಾನ ಮಾಡಲ್ಪಟ್ಟ ಪದಾರ್ಥದ ಫಲದ ದೆಸೆಯಿಂದಲೂ ಹೆಚ್ಚಾದ ದಾನದ ಫಲವುಳ್ಳವನು, ಪುರುಷಾರ್ಥಕ್ಕೆ ಕಾರಣವಾದಂತಹ ಪದಾರ್ಥದ ದಾತೃತ್ವವಿರುವುದರಿಂದ ಗೋದಾನ ಮಾಡಿದವನಂತೆ' ಎಂಬುದಾಗಿ.

**5) ಪುರಾಣಗಳಲ್ಲಿ :**

ಸರ್ವೋಪನಿಷದೋ ಗಾವಃ ದೋಗ್ಧಾ ಗೋಪಾಲನಂದನಃ ।
ಪಾರ್ಥೋವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ।
(ಪುರಾಣ ವಚನ)

ಸಕಲ ಉಪನಿಷತ್ತುಗಳು ಗೋವುಗಳು, ಶ್ರೀಕೃಷ್ಣ ಹಾಲು ಕರೆಯುವವ, ಅರ್ಜುನನೇ ಕರು, ಗೀತಾಮೃತವೇ ಅವನು ಕರೆದ ಹಾಲು, ಸಜ್ಜನರು ಅದನ್ನು ಸವಿಯುವವರಾಗಿದ್ದಾರೆ.

(ಮಾನವನ ದೇಹದ ಪೋಷಣೆಗೆ ಅವಶ್ಯವಾದ ಸಕಲ ಅಂಶಗಳು ಗೋವಿನ ಹಾಲಿನಲ್ಲಿರುವಂತೆ, ಮಾನವನ ಪೋಷಣೆಗೆ ಅವಶ್ಯವಾದ ಎಲ್ಲ ವಿಚಾರಗಳು ಗೀತೆಯಲ್ಲಿ ಇವೆ.)

ನಾರಾಯಣೇತಿ ಯಸ್ಯಾಸ್ತೇ ವದನೇ ನಾಮ ಮಂಗಲಮ್ ।
ನಾರಾಯಣಸ್ತಮನ್ವೇತಿ ವತ್ಸಂ ಗೌರಿವ ವತ್ಸಲಾ ॥ (ಪಾಂಡವಗೀತೆ)

ಕರುವಿನ ಕೂಗು ಕೇಳಿದೊಡನೆಯೇ ಗೋವು ತನ್ನ ಕರುವಿನ ಹತ್ತಿರ ಬಂದು ಹಾಲು ಕುಡಿಸಿ ತೃಪ್ತಿಗೊಳಿಸುವಂತೆ - ಸಂಸಾರ ನಿಮಗ್ನನಾದ ಭಕ್ತನು ತನ್ನನ್ನು ಸ್ಮರಿಸಿದ ಕೂಡಲೇ ನಾರಾಯಣನು ಧಾವಿಸಿ ಬಂದು ಭಕ್ತನನ್ನು ರಕ್ಷಿಸುವನು.

ಇತಿ ಪ್ರಿಯಂ ಹಿತಂ ವಾಕ್ಯಂ ಭುವ ಆದಾಯ ಭೂಪತಿಃ ।
ವತ್ಸಂ ಕೃತ್ವಾ ಮನುಂ ಪಾಣಾವದುಹತ್ಸಕಲೌಷಧೀಃ ॥
(ಶ್ರೀಮದ್ ಭಾಗವತ 4-18-12)

ಪೃಥುರಾಜರು ಸ್ವಾಯಂಭುವ ಮನುವನ್ನು ಕರುವನ್ನಾಗಿ ಮಾಡಿ ತನ್ನ ಹಸ್ತವನ್ನೇ ಪಾತ್ರೆಯನ್ನಾಗಿ ಮಾಡಿ ಸಕಲ ಸಸ್ಯವರ್ಗಗಳನ್ನು ಕ್ಷೀರ ರೂಪದದಿಂದ ಕರೆದರು.

ವತ್ಸ ಆಸೀತ್ತದಾ ಬ್ರಹ್ಮಾ ಸ್ವಯಂ ವಿಷ್ಣುರಯಂ ಹಿ ಗೌಃ ।
ಪ್ರವಿಶ್ಯ ತ್ರಿಪುರಂ ಕಾಲೇ ರಸಕೂಪಾಮೃತಂ ಪಪೌ ॥
(ಶ್ರೀಮದ್ ಭಾಗವತ (7-11-12)

ತ್ರಿಪುರವನ್ನು ದಹಿಸಿಬಿಡುತ್ತೇನೆಂಬ ರುದ್ರದೇವರ ಸಂಕಲ್ಪ ಭಗ್ನವಾಗಲು ರುದ್ರದೇವರು ವಿಷ್ಣುವೇ ಸ್ವತಂತ್ರನೆಂದು ಯೋಚಿಸಿ ಮೊರೆ ಹೊಕ್ಕರು. ಆಗ ಶ್ರೀವಿಷ್ಣುವು ತ್ರಿಪುರದಹನಕ್ಕೆ ಉಪಾಯ ಕಲ್ಪಿಸಿದನು. ಶ್ರೀ ವಿಷ್ಣುವು ತಾನೇ ಗೋರೂಪನಾದನು. ಬ್ರಹ್ಮದೇವರನ್ನು ಕರುವನ್ನಾಗಿ ಮಾಡಿಕೊಂಡು ತ್ರಿಪುರಕ್ಕೆ ಬಂದು ಸಿದ್ಧಾಮೃತ ರಸಕೂಪದಲ್ಲಿದ್ದ ಅಮೃತವನ್ನು ಸಂಪೂರ್ಣವಾಗಿ ಕುಡಿದನು. ಹೀಗೆ ರುದ್ರದೇವರನ್ನು ಅನುಗ್ರಹಿಸಿ ಅವರಿಂದ ತ್ರಿಪುರವನ್ನು ದಹಿಸಿದನು.



# ಶ್ರೀಹರಿಕಥಾಮೃತಸಾರದಲ್ಲಿ ಗೋವಿನ ಉಲ್ಲೇಖ

ದಾಸ ಶ್ರೇಷ್ಠರಾದ ಶ್ರೀ ಜಗನ್ನಾಥದಾಸರು ಶ್ರೀಹರಿಕಥಾಮೃತ ಸಾರದಲ್ಲಿ ಗೋವಿನ ಕುರಿತು ಕೆಲವು ಅಪೂರ್ವ ವಿಷಯಗಳನ್ನು ತಿಳಿಸಿಕೊಟ್ಟಿದ್ದಾರೆ.

ಶ್ರೀಹರಿಯ ಪಂಚಸಾಮರೂಪಗಳನ್ನು ತಿಳಿಸುತ್ತ ಗೋವಿನಲ್ಲಿ ಭಗವಂತನು 'ಉದ್ಗೀಥ'ನಾಮಕನಾಗಿ ಇರುವನೆಂದು ತಿಳಿಸಿದ್ದಾರೆ 1.

ಗೋವುಗಳೊಳುದ್ಗೀಥನಿಹ ಪ್ರ
ಸ್ತಾವ ಹಿಂಕಾರೆರಡು ರೂಪದಿ
ಆವಿ ಅಜಗಳೊಳಿಹನು ಪ್ರತಿಹಾರಾಹ್ವಹಯಗಳೊಳು ।
ಜೀವನಪ್ರದ ನಿಧನ ಮನುಜರೊ
ಳೀ ವಿಧದಲಿಹ ಪಂಚ ಸಾಮವ
ಜಾವ ಜಾವಕೆ ನೆನೆವರಿಗೆ ಐದಿಸನು ಜನ್ಮಗಳ ॥ (6-14)

ಗೋವುಗಳೊಳಗೆ ಉದ್ಗೀಥನಾಮಕನಾದ ಶ್ರೀಹರಿ ಇರುವನು. ಪ್ರಸ್ತಾವ ಮತ್ತು ಹಿಂಕಾರ ಎಂಬ ಎರಡು ರೂಪಗಳಿಂದ ಕುರಿ ಮತ್ತು ಮೇಕೆಗಳಲ್ಲಿರುವನು. ಪ್ರತಿಹಾರ ಎಂಬ ಹೆಸರಿನಿಂದ ಅಶ್ವಗಳಲ್ಲಿರುವನು. ಜೀವನಪ್ರದನಾಗಿ ಶ್ರೀಹರಿಯು ನಿಧನನಾಮಕನಾಗಿ ಮನುಷ್ಯರಲ್ಲಿರುವನು. ಈ ವಿಧದಲ್ಲಿ ಪಂಚಸಾಮಗಳನ್ನು ಯಾಮ ಯಾಮಕ್ಕೆ ನೆನೆಯುವವರಿಗೆ ಪುನರ್ಜನ್ಮಗಳನ್ನು ಕೊಡುವುದಿಲ್ಲ.

ಶ್ರೀಹರಿಯ ವಿಭೂತಿ ರೂಪಗಳ ಅಧಿಷ್ಠಾನಗಳನ್ನು ತಿಳಿಸುತ್ತ ಗೋವಿನಲ್ಲಿ ಭಗವಂತನ ಅಧಿಷ್ಠಾನ ರೂಪವಿದೆಯೆಂದು ತಿಳಿಸಿದ್ದಾರೆ2.

ಪ್ರತಿಮೆ ಸಾಲಿಗ್ರಾಮ ಗೋಽಭ್ಯಾ
ಗತ ಅತಿಥಿ ಶ್ರೀ ತುಳಸಿ ಪಿಪ್ಪಲ
ಯತಿ ವನಸ್ಥ ವಟುಯಜಮಾನ ಸ್ವಪರಜನ ।

---

1) ಅಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಮೇತಾ ರೇವತ್ಯಃ ಪಶುಷು ಪ್ರೋತಾಃ ಸಯ ಏವಮೇತಾ ರೇವತ್ಯಃ ಪಶುಷುಪ್ರೋತಾ ವೇದ ಪಶುಮಾನ್ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಪಶೂನ್ನ ನಿಂದೇತ್ತದ್ ವ್ರತಮ್ ॥

॥ ಛಾಂದೋಗ್ಯ ಉಪನಿಷತ್ ॥

2) ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಮ್ ।
ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾ ಪದಾನಿ ಮೇ ॥

ಶ್ರೀ ಮದ್‌ಭಾಗವತ (11-11-42) )

ಪೃಥಿವಿ ಜಲ ಶಿಖಿ ಪವನ ತಾರಾ
ಪಥ ನವಗ್ರಹ ಯೋಗ ಕರಣ ಭ
ತಿಥಿ ಸಿತಾಸಿತಪಕ್ಷ ಸಂಕ್ರಮ ಅವನಧಿಷ್ಠಾನ ॥ (5-3)

ಪ್ರತಿಮೆ, ಶಾಲಿಗ್ರಾಮ, ಗೋವುಗಳು, ಅಭ್ಯಾಗತರು, ಅತಿಥಿಗಳು, ಶ್ರೀತುಳಸಿ, ಅಶ್ವತ್ಥ, ಯತಿ, ವಾನಪ್ರಸ್ಥ, ಗೃಹಸ್ಥ, ಬ್ರಹ್ಮಚಾರಿ, ಯಜಮಾನ, ಸ್ವಜನ ಮತ್ತು ಪರಜನಗಳು, ಪೃಥ್ವಿ, ಅಗ್ನಿ, ಜಲ, ವಾಯು, ಆಕಾಶ, ನವಗ್ರಹಗಳು, ಯೋಗ, ಕರಣಗಳು, ನಕ್ಷತ್ರಗಳು, ತಿಥಿಗಳು, ಶುಕ್ಲ, ಕೃಷ್ಣ ಪಕ್ಷಗಳು ಮತ್ತು ಸಂಕ್ರಮಣಗಳು ಆವನಿಗೆ ಅಧಿಷ್ಠಾನ.

ಇಲ್ಲಿ ಪ್ರತಿಮಾ, ಗೋವು, ಶ್ರೀತುಲಸಿ, ಅಶ್ವತ್ಥಗಳಲ್ಲಿ ಭಗವಂತನ ಅಹಿತವಿಭೂತಿ ರೂಪಗಳಿವೆ ಎಂದು ತಿಳಿಯಬೇಕೆಂಬುದಾಗಿ ಶ್ರೀ ಸಂಕರ್ಷಣ ಒಡೆಯರ ವ್ಯಾಖ್ಯಾನದಲ್ಲಿದೆ.

ಗೋವಿನ ಹೆಜ್ಜೆಯಲ್ಲಿ ನಿಂತ ನೀರು ನಿರ್ಮಲವಾದ ತೀರ್ಥವೆಂದು ಯೋಗಿಯು ಅನುಸಂಧಾನ ಮಾಡುವನೆಂದು ತಿಳಿಸಿದ್ದಾರೆ.

ಮೇದಿನಿಯ ಮೇಲುಳ್ಳ ಗೋಷ್ಪಾ
ದೋದಕಗಳೆಲ್ಲಮಲ ತೀರ್ಥವು
ಪಾದ ಪಾದ್ರಿ ಧರಾ ತಳವೆ ಸುಕ್ಷೇತ್ರ ಜೀವಗಣ ।
ಶ್ರೀಧರನ ಪ್ರತಿಮೆಗಳು ಅವರುಂ
ಬೋದನವೆ ನೈವೇದ್ಯ ನಿತ್ಯದಿ
ಹಾದಿ ನಡೆವದೆ ನರ್ತನಗಳೆಂದರಿತವನೆ ಯೋಗಿ । (10-3)

ಭೂಮಿಯ ಮೇಲಿನ ಸಕಲ ಗೋಷ್ಪಾದೋದಕಗಳು ನಿರ್ಮಲವಾದ ತೀರ್ಥಗಳು. ಮರಗಳು, ಪರ್ವತಗಳು ಮತ್ತು ಭೂಮಿ ಇವೆಲ್ಲ ಉತ್ತಮ ಕ್ಷೇತ್ರಗಳು. ಜೀವ ಸಮುದಾಯವು ಶ್ರೀಧರನಾದ ಶ್ರೀ ಹರಿಯ ಪ್ರತೀಕ. ಅವರು ತಿನ್ನುವ ಆಹಾರವೇ ಶ್ರೀಹರಿಗೆ ನೈವೇದ್ಯ. ನಿತ್ಯಹಾದಿ ನಡೆದಾಡುವದೆಲ್ಲಾ ಶ್ರೀಹರಿಗೆ ನರ್ತನ ಎಂದು ಅರಿತವನೇ ಯೋಗಿಯು.

ಗೋವು ಕರುಹಾಕಿದ ಮೇಲೆ ಮಾತ್ರ ಪೂಜಾರ್ಹವೆಂದು ಶ್ರೀದಾಸರು ಇಲ್ಲಿ ತಿಳಿಸುತ್ತಿದ್ದಾರೆ[3].

---

3) ಶೈವ ಶೂದ್ರಾರ್ಚಿತಂ ಚೇಶಂ ವಾಯುಂ ತು ಹರಿಮೇವ ಚ ।
ದ್ವಿಮಾಸ ಹೀನಾಂ ತುಲಸೀಮಪ್ರಸೂತಾಂ ಚ ಗಾಂ ಸತೀಮ್ ।
ವಿವಾಹ ಶೂನ್ಯಮಶ್ವತ್ಥಂ ನಮಂತೇ ಪೂಜಯಂತಿ ಚ ॥
ತೇ ಸರ್ವೇ ಹ್ಯಸುರಾಜ್ಞೇಯಾಃ ನಾತ್ರಕಾರ್ಯಾ ವಿಚಾರಣಾ ॥ -
(ಗರುಡ ಪುರಾಣ ಬ್ರಹ್ಮಕಾಂಡ)

ಶೈವ ಶೂದ್ರ ಕರಾರ್ಚಿತ ಮಹಾ
ದೇವ ವಾಯು ಹರಿ ಪ್ರತಿಮೆ ವ್ರಂ
ದಾವನದಿ ಮಾಸದ್ವಯದೊಳಿಹ ತುಳಸಿ ಅಪ್ರಸವ ।
ಗೋ ವಿವಾಹವರ್ಜಿತಾಶ್ವ
ತ್ಥಾವಿಟಪಿಗಳ ಭಕ್ತಿ ಪೂರ್ವಕ
ಸೇವಿಸುವ ನರದೈತ್ಯ ಶಾಶ್ವತ ದುಃಖ ವೈದುವನು ॥ (30-8)

ಶೈವರು, ಶೂದ್ರರು ಮೊದಲಾದವರಿಂದ ಪೂಜಿತವಾದ ಶಿವಲಿಂಗ, ವಾಯು ಪ್ರತಿಮೆ, ಹರಿಯ ವಿಗ್ರಹಗಳು, ಎರಡು ತಿಂಗಳು ಬೆಳೆಯದ ತುಲಸಿ, ಕರುಹಾಕದ ಗೋವು, ವಿವಾಹವಾಗದ ಅಶ್ವತ್ಥ ವೃಕ್ಷ ಇವುಗಳನ್ನು ಭಕ್ತಿಪೂರ್ವಕವಾಗಿ ಸೇವಿಸುವ ಮನುಷ್ಯನು ದೈತ್ಯ ಅವನು ಶಾಶ್ವತ ದುಃಖವನ್ನು ಹೊಂದುತ್ತಾನೆ.

ಕರುಹಾಕಿ ಕರುವು ಅಕಸ್ಮಾತ್ ಸತ್ತಿದ್ದರೆ, ಆ ಗೋವನ್ನು ಪೂಜಿಸಬಹುದು. ಕರುವನ್ನು ಪ್ರಸವಿಸದಿರುವ ಗೋವು ಪೂಜೆಗೆ ನಿಷಿದ್ಧ. ಹಾಗಾಗಿ ಬಂಜೆಯಾದ ಆಕಳನ್ನು ಕಸಾಯಿಖಾನೆಗೆ ಕಳುಹಿಸಬಹುದಲ್ಲ ಎನ್ನಬೇಡಿ. ಆ ಗೋವನ್ನು ಸಾಕಬೇಕು ಹುಲ್ಲು, ನೀರು ಕೊಡಬಹುದು. ಗೋಹತ್ಯೆ ನಿಷಿದ್ಧ, ಕಾರಣ ಅಂಥ ಗೋವುಗಳನ್ನು ಕೊಲ್ಲಕೂಡದು. ಪೂಜೆ ಮಾತ್ರ ಮಾಡಬಾರದು ಎಂಬುದು ಶ್ರೀದಾಸರಾಯರ ಹಾರ್ದ ಅಷ್ಟೇ.

ಗೋವು ಕರುವಿನ ಧ್ವನಿಗೆ ಧಾವಿಸುವಂತೆ ಶ್ರೀಹರಿಯು ತನ್ನ ಭಕ್ತರ ಬಳಿಗೆ ಧಾವಿಸುತ್ತಾನೆಂದು ಇಲ್ಲಿ ಶ್ರೀದಾಸರು ತಿಳಿಸಿದ್ದಾರೆ.

ಮತ್ಸ್ಯಕೇತನ ಜನಕ ಹರಿ ಶ್ರೀ
ವತ್ಸಲಾಂಛನ ನಿಜಶರಣಜನ
ವತ್ಸಲ ವರಾಹೋಹ ವೈಕುಂಠಾಲಯ ನಿವಾಸಿ ।
ಚಿತ್ಸುಖಪ್ರದ ಸಲಹೆನಲು ಗೋ
ವತ್ಸ ಧ್ವನಿಗೊದಗುವ ತೆರದಿ ಪರ
ಮೋತ್ಸಹದಿ ಬಂದೊದಗುವನು ನಿರ್ಮತ್ಸರರ ಬಳಿಗೆ ॥ (19-27)

ಮನ್ಮಥ ಜನಕನೆ ! ಸಂಸಾರ ಪರಿಹಾರಕನೆ ! ಶ್ರೀ ವತ್ಸಲಾಂಛನನೆ ! ನಿನ್ನನ್ನು ಶರಣು ಬಂದ ಭಕ್ತರನ್ನು ಕರುಗಳಂತೆ ಸ್ವೀಕರಿಸುವವನೆ! ಮಹಾಲಕ್ಷ್ಮಿಯನ್ನು ಧರಿಸಿದವನೆ ! ವೈಕುಂಠ ಮಂದಿರದಲ್ಲಿ ನೆಲೆಸಿದವನೆ ! ಜ್ಞಾನಾನಂದಪ್ರದನೆ ! ಸಲಹು ಎನ್ನಲು ಗೋವು ಕರುವಿನ ಧ್ವನಿಗೆ ಧಾವಿಸಿ ಬರುವಂತೆ ಶ್ರೀಹರಿಯು ಮತ್ಸರರಹಿತರಾದ ತನ್ನ ಭಕ್ತಜನರ ಬಳಿಗೆ ಬಂದು ಪಾಲಿಸುತ್ತಾನೆ ಸಂದೇಹವಿಲ್ಲ.



# ಕಾವ್ಯ, ಇತಿಹಾಸ, ಪುರಾಣಗಳಲ್ಲಿ ಗೋದಾನದ ಉಲ್ಲೇಖಗಳು

'ಗೋದಾನ' ಜೀವನದ ಒಂದು ಅವಿಭಾಜ್ಯ ಅಂಗವೆನಿಸುವಷ್ಟು ಹೇರಳ ಉದಾಹರಣೆಗಳು ನಮ್ಮ ಕಾವ್ಯ, ಇತಿಹಾಸ, ಪುರಾಣಗಳಲ್ಲಿ ದೊರೆಯುತ್ತವೆ. ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ.

**1) ಶ್ರೀ ಸುಮಧ್ವವಿಜಯ ಮಹಾಕಾವ್ಯ :**

ಶ್ರೀ ವಾಯುದೇವರ ಮೂರನೆಯ ಅವತಾರ ಮಧ್ವಾವತಾರ. ಈ ಅವತಾರದಲ್ಲಿ ಅವರ ಬಾಲ್ಯದ ಹೆಸರು 'ವಾಸುದೇವ'. ವಾಸುದೇವನಿಗೆ ಹಾಲು ಕುಡಿಸಲೆಂದು 'ಮೂಡಿಲ್ಲಾಯ' ಎಂಬ ಬ್ರಾಹ್ಮಣರು ಮಧ್ಯಗೇಹ ಭಟ್ಟರಿಗೆ ಒಂದು 'ಗೋದಾನ' ಮಾಡಿದರಂತೆ. 'ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್' ಉಕ್ತಿಯಂತೆ ಈ ಗೋದಾನವು ದಾನಕೊಟ್ಟ ಮೂಡಿಲ್ಲಾಯರಿಗೆ ಮೋಕ್ಷಸಾಧಕವಾಯಿತು. 'ಗೋದಾತ್ರೇ ಮೋಕ್ಷದಾತಾ' ಎಂಬಂತೆ. ಅಂದರೆ ಮೂಡಿಲ್ಲಾಯರು ತಮ್ಮ ಮಗನಿಗೆ ಮಗನಾಗಿ ಹುಟ್ಟಿ ಶ್ರೀ ಮಧ್ವಾಚಾರ್ಯರಿಂದ ಮೋಕ್ಷಸಾಧಕವಾದ ಜ್ಞಾನವನ್ನು ಪಡೆದುಕೊಂಡು ಮುಕ್ತಿ ಹೊಂದಿದರು.

**2) ಶ್ರೀ ರುಕ್ಮಿಣೀಶವಿಜಯ ಮಹಾಕಾವ್ಯ :**

ಶ್ರೀಕೃಷ್ಣನು ಅವತಾರ ಮಾಡಿದಾಗ ನಂದಗೋಪನು ಬ್ರಾಹ್ಮಣರಿಗೆ ಎರಡು ಲಕ್ಷ ಗೋದಾನ ಮಾಡಿದನಂತೆ. ಅಂದರೆ ಪುತ್ರೋತ್ಸವ ಕಾಲದಲ್ಲಿ 'ಗೋದಾನ' ಮಾಡುವುದು ಆಗಿನ ಕಾಲದ ಪದ್ಧತಿಯಾಗಿತ್ತು.

**3) ಶ್ರೀಮದ್ರಾಮಾಯಣ :**

ಶ್ರೀರಾಮಚಂದ್ರನು ಪಿತೃವಾಕ್ಯ ಪರಿಪಾಲನೆಗಾಗಿ ಕಾಡಿಗೆ ತೆರಳುವ ಸಂದರ್ಭದಲ್ಲಿ ತ್ರಿಜಟ ಬ್ರಾಹ್ಮಣನಿಗೆ ದೃಷ್ಟಿ ಬೀಳುವಷ್ಟು ಗೋವುಗಳನ್ನು ದಾನ ಮಾಡಿದನು.

**4) ಶ್ರೀಮದ್ ಭಾಗವತ :**

ಒಮ್ಮೆ ನೃಗ ಮಹಾರಾಜನು ಒಬ್ಬ ಬ್ರಾಹ್ಮಣನಿಗೆ ನೂರಾರು ಆಕಳುಗಳನ್ನು ದಾನ ಮಾಡಿದ. ಈ ದಾನ ಮಾಡಿದ ಗೋವುಗಳಲ್ಲಿ ಒಂದು ಗೋವು ಆ ಗುಂಪಿನಿಂದ ತಪ್ಪಿಸಿಕೊಂಡು ಬಂದು ರಾಜನ ಅರಮನೆಯ ಗೋವುಗಳಲ್ಲಿ ಸೇರಿಕೊಂಡಿತು. ರಾಜ ಇದನ್ನು ತಿಳಿಯದೇ ತನ್ನ ಇತರ ಗೋವುಗಳೊಡನೆ ಇದನ್ನು ಸೇರಿಸಿ ದಾನ ಮಾಡಿಬಿಟ್ಟ, ಇನ್ನೊಬ್ಬ ಬ್ರಾಹ್ಮಣನಿಗೆ. ಆ ಇಬ್ಬರು ಬ್ರಾಹ್ಮಣರಲ್ಲಿ ಈ ಒಂದು

ಗೋವಿನ ಕುರಿತು ವಿವಾದ ಉಂಟಾಯಿತು. ಇಬ್ಬರೂ ಇದು ನನ್ನ ಗೋವು ಎಂದು ಹೇಳಿಕೊಳ್ಳುತ್ತ ರಾಜನ ಹತ್ತಿರ ಬಂದರು. ಒಂದು ಗೋವಿನ ಬದಲಾಗಿ ಲಕ್ಷ ಗೋವುಗಳನ್ನು ಕೊಡುವೆನೆಂದು ರಾಜ ಹೇಳಿದ. ಆದರೆ ಬ್ರಾಹ್ಮಣರಿಬ್ಬರೂ ಅದಕ್ಕೊಪ್ಪದೇ ರಾಜನಿಗೆ ಶಾಪವಿತ್ತರು. ನೃಗ ಮಹಾರಾಜ ಓತಿಕ್ಯಾತನ ಜನ್ಮ ಹೊಂದಿದ. ಗೋದಾನ ಕೊಡುವುದು ಶ್ರೇಯಸ್ಕರವೇ, ಆದರೆ ದಾನ ಕೊಡುವಾಗ ಎಚ್ಚರವಿರಬೇಕು ಎಂಬುದನ್ನು ಈ ಘಟನೆ ನಮಗೆ ನೀತಿಯನ್ನು ಕೊಡುತ್ತಿದೆ. 'ದತ್ತಾಪಹಾರದೋಷ ಸಲ್ಲದು'.



# ಗೋದಾನದ ಹಿರಿಮೆ

ಮನುಷ್ಯನು ಮನಸ್ಸಿನಿಂದ ಮಾಡಿದ ಅಪಚಾರ, ಕೈಯಿಂದ ಮಾಡಿದ ಕುಕೃತ್ಯ, ಗೆಳೆಯರಿಗೆ ಮಾಡಿದ ಮೋಸ, ಕನ್ಯೆಯರ ಕಲ್ಯಾಣಕ್ಕೆ ಕಲ್ಲು ಹಾಕುವುದು, ವ್ಯವಹಾರದಲ್ಲಿ ಮಾಡಿದ ಮೋಸ ಇವುಗಳಿಂದ ಬರುವ ಪಾಪಗಳಿಗೆ ಒಂದೇ ಪರಿಹಾರಸೂತ್ರವೆಂದರೆ 'ಗೋದಾನ'.

ಸಾವಿರ ಗೋವುಗಳನ್ನು ಹೊಂದಿದವನು ನೂರು ಗೋವುಗಳನ್ನು ದಾನಕೊಡಬೇಕು [1].

ಎಲ್ಲ ಶಾಸ್ತ್ರಮಯವಾದುದು ಗೀತೆ. ಎಲ್ಲ ಪಾಪಗಳನ್ನು ಕಳೆಯುವವನು ಶ್ರೀಹರಿ. ಎಲ್ಲ ಸಂಪತ್ತುಗಳಲ್ಲಿ ಶ್ರೇಷ್ಠವಾದುದು ಜ್ಞಾನ ಸಂಪತ್ತು. ಎಲ್ಲ ದಾನಗಳಲ್ಲಿ 'ಗೋದಾನ' ಮುಖ್ಯವಾದುದು [2].

ಎಂತಹ ಘೋರ ಪಾಪಗಳನ್ನು ಮಾಡಿದ್ದರೂ, ಗೋದಾನವು ಆ ಎಲ್ಲ ಪಾಪಗಳಿಂದ ಪಾರು ಮಾಡುತ್ತದೆ. ಯಾರು ಭಕ್ತಿಯಿಂದ ಒಂದು ಗೋವನ್ನಾದರೂ ಖರೀದಿಸಿ ಯೋಗ್ಯರಿಗೆ (ಸತ್ಪಾತ್ರರಿಗೆ) ದಾನ ಮಾಡುವರೋ ಅವರು ಆ ಗೋವಿನಲ್ಲಿ ಎಷ್ಟು ಕೂದಲುಗಳಿವೆಯೋ ಅಷ್ಟು ಗೋವುಗಳ ದಾನದ ಫಲವನ್ನು ಹೊಂದುತ್ತಾರೆ[3].

ದಾನ ಮಾಡುವುದರಿಂದ ಪೂತಾತ್ಮನಾಗಲು ಇಚ್ಛಿಸುವವನು ಯಾವಾಗಲೂ ವಿಶೇಷವಾಗಿ ಗೋದಾನವನ್ನು ಮಾಡಬೇಕು [4].

---

1 ಶತಂ ಸಹಸ್ರಗುರ್ದದ್ಯಾತ್ ಸರ್ವೇ ಸಮಫಲಾಃ ಸ್ಮೃತಾಃ ॥
(ಧರ್ಮಮಯೂಖ)

2 ಸರ್ವಶಾಸ್ತ್ರಮಯೀ ಗೀತಾ ಸರ್ವಪಾಪಹರೋ ಹರಿಃ ।
ಸರ್ವ ಸಂಪನ್ನಯಂ ಜ್ಞಾನಂ ದಾನೇ ಗೋದಾನಮೇವತತ್ ॥

3 ಯಾನಿ ಕಾನಿ ಚ ದುರ್ಗಾಣಿ ದುಷ್ಕೃತಾನಿ ಕೃತಾನಿ ಚ ।
ತರಂತಿ ಚೈವ ಪಾಪ್ಮಾನಂ ಧೇನುಂ ಯೇ ದದತಿ ಪ್ರಭೋ ॥
ಏಕೇನೈವ ಚ ಭಕ್ತೇನ ಯಃ ಕ್ರೀತ್ವಾ ಗಾಂ ಪ್ರಯಚ್ಛತಿ ।
ಯಾವಂತಿ ತಸ್ಮಾ ರೋಮಾಣಿ ಸಂಭವಂತಿ ಶತಕ್ರತೋ ।
ತಾವತ್ ಪ್ರದಾನಾತ್ ಸ ಗವಾಂ ಫಲಮಾಪ್ನೋತಿ ಶಾಶ್ವತಮ್ ॥

4 ದಾನೇನ ಯಃ ಪ್ರಯತೋಽಭೂತ್ಸದೈವ
ವಿಶೇಷತೋ ಗೋಪ್ರದಾನಂ ಚ ಕುರ್ಯಾತ್ ॥ (ಶ್ರೀಮನ್ಮಹಾಭಾರತ)

ನ್ಯಾಯ ಪೂರ್ವಕವಾಗಿ ಸಂಪಾದಿಸಿದ ಗೋವನ್ನು ಬ್ರಾಹ್ಮಣರಿಗೆ ದಾನ ಕೊಡಬೇಕು. ಪರೀಕ್ಷಿಸಿ ಸತ್ಪಾತ್ರನಲ್ಲಿ ದಾನ ಮಾಡಿದ ಗೋವನ್ನು ಅವನ ಮನೆಗೆ ಕಳುಹಿಸಿಕೊಡಬೇಕು [5].

ಮನುಷ್ಯನು ನ್ಯಾಯೋಚಿತವಾದ ರೀತಿಯಲ್ಲಿ ಸಂಪಾದಿಸಿದ ಕಪಿಲಾಗೋವನ್ನು ದಾನವಾಗಿ ಕೊಟ್ಟರೆ ಸಮಸ್ತ ಪಾಪಗಳಿಂದ ವಿಮುಕ್ತನಾಗುತ್ತಾನೆ[6]. (ಅಕ್ಷಯ ಫಲ ಪ್ರಾಪ್ತವಾಗುತ್ತದೆ).

ಹತ್ತುಗೋದಾನ ಮಾಡುವವನು ಒಂದು ಹೋರಿಯನ್ನು ದಾನ ಮಾಡಬೇಕು. ಪಿತೃಗಳ ಉದ್ದೇಶದಿಂದ ಒಂದು 'ಬಸವ' ನನ್ನು ಬಿಡಬೇಕು. ಇದಕ್ಕೆ 'ವೃಷೋತ್ಸರ್ಗ' ಎನ್ನುತ್ತಾರೆ. ಹೀಗೆ ಮಾಡುವುದರಿಂದ ಭವಬಂಧನದಿಂದ ಮುಕ್ತಿಯಾಗಿ ಮೋಕ್ಷ ದೊರೆಯುತ್ತದೆ [7].

ಸಾಕ್ಷಾತ್ತಾಗಿ ಗೋವನ್ನು ದಾನ ಕೊಡಲು ಸಾಧ್ಯವಾಗದಿದ್ದಾಗ, ಅದರ ಬದಲು ಗೋವಿನ ಬೆಲೆಯನ್ನು, ವಸ್ತ್ರವನ್ನು ಮತ್ತು ಸುವರ್ಣವನ್ನು ಕೊಡುವವನು 'ಗೋದಾನಿ' ಎನಿಸಿಕೊಳ್ಳುತ್ತಾನೆ. ಬೆಲೆಯ ರೂಪದಲ್ಲಿ, ವಸ್ತ್ರದ ರೂಪದಲ್ಲಿ ಮತ್ತು ಸುವರ್ಣದ ರೂಪದಲ್ಲಿ ಕೊಡುವ ಗೋವುಗಳನ್ನು ಕ್ರಮವಾಗಿ 'ಊರ್ಧ್ವಾಸ್ಯಾ', 'ಭವಿತವ್ಯಾ', ಮತ್ತು ವೈಷ್ಣವೀ ಎಂಬ ಹೆಸರುಗಳಿಂದ ಕರೆಯಬೇಕು. ದಾನಕೊಡುವ ಸಮಯದಲ್ಲಿ ಈ ಹೆಸರುಗಳನ್ನು ಹೇಳಿಕೊಂಡೇ ಸಂಕಲ್ಪಮಾಡಬೇಕು.

ಇಮಾಂ ಊರ್ಧ್ವಾಸ್ಯಾಂ - ಇಮಾಂ ಭವಿತವ್ಯಾಂ - ಇಮಾಂ ವೈಷ್ಣವೀಂ ತುಭ್ಯಮಹಂ ಸಂಪ್ರದದೇ ನಮಮ ನಮಮ, ಎಂದು ಹೇಳಿಕೊಂಡು ದಾನ ಕೊಡಬೇಕು. ದಾನ ತೆಗೆದುಕೊಳ್ಳುವವನು ಇಮಾಂ ಊರ್ಧ್ವಾಸ್ಯಾಂ, ಇಮಾಂ ಭವಿತವ್ಯಾಂ, ಇಮಾಂ ವೈಷ್ಣವೀಂ ಪ್ರತಿಗೃಹ್ಣಾಮಿ ಎಂದು ಕ್ರಮವಾಗಿ ಹೇಳಬೇಕು[8].

---

5 ಏತದ್ದಾನಂ ನ್ಯಾಯಲಬ್ಧಂ ದ್ವಿಜೇಭ್ಯಃ
ಪಾತ್ರೇದತ್ತಂ ಪ್ರಾಪಣೀಯಂ ಪರೀಕ್ಷ್ಯ ॥ (ಶ್ರೀಮನ್‌ಮಹಾಭಾರತ)

6 ಗಾಮಪ್ಯೇಕಾಂ ಕಪಿಲಾಂ ಸಂಪ್ರದಾಯ
ನ್ಯಾಯೋಪೇತಾಂ ಕಲುಷಾದ್ವಿಪ್ರಮುಚ್ಯೇತ
॥ (ಶ್ರೀಮನ್‌ಮಹಾಭಾರತ)

7 ತಸ್ಮಾತ್ ಪಿತೃ ವಿಮುಕ್ತ್ಯರ್ಥಂ ವೃಷಯಜ್ಞಂ ಸಮಾಚರೇತ್ ॥
(ಗರುಡ ಪುರಾಣ)

8 ಗೋಪ್ರದಾನೀತಿ ವಕ್ತವ್ಯಮರ್ಘ್ಯ ವಸ್ತ್ರ ವಸುಪ್ರದಃ ।
ಊರ್ಧ್ವಾಸ್ಯಾ ಭವಿತವ್ಯಾ ಚ ವೈಷ್ಣವೀತಿ ಚ ಚೋದಯೇತ್ ।
ನಾಮ ಸಂಕೀರ್ತಯೇತ್ ತಸ್ಯಾ ಯಥಾಸಂಖ್ಯೋತ್ತರಂ ಸ ವೈ ॥
ಶ್ರೀಮನ್‌ಮಹಾಭಾರತ

ಕರುವಿನಿಂದ ಕೂಡಿದ, ಹೆಚ್ಚು ಹಾಲು ಕೊಡುವ, ಒದೆಯದಿರುವ, ಹಾಯದಿರುವ, ವಸ್ತ್ರದಿಂದ ಹೊದಿಸಲ್ಪಟ್ಟ ಹಸುವನ್ನು ಬ್ರಾಹ್ಮಣನಿಗೆ ದಾನ ಮಾಡಿದವನು ಸರ್ವ ಪಾಪಗಳಿಂದ ವಿಮುಕ್ತನಾಗುತ್ತಾನೆ. ಇಂತಹ ಗೋದಾನ ಮಾಡಿದವನು 'ಅಸುರ್ಯಾ' ಎಂಬ ಅಂಧಕಾರಮಯವಾದ ನರಕಗಳಿಗೆ ಹೋಗಬೇಕಾಗಿಲ್ಲ [9].

ನೀರನ್ನು ಕುಡಿದು ಹುಲ್ಲನ್ನು ತಿಂದು ಮುಗಿಸಿರುವ, ಹಾಲಿಲ್ಲದ, ಶಿಥಿಲವಾದ ಇಂದ್ರಿಯಗಳಿಂದ ಕೂಡಿದ, ಮುಪ್ಪಿನಿಂದ ರೋಗದಿಂದ ಸೊರಗಿರುವ, ಕೃಶವಾಗಿರುವ, ಯಾವುದೇ ಕೆಲಸಕ್ಕೆ ಉಪಯೋಗವಿಲ್ಲದಿರುವ ಹಸುವನ್ನು ದಾನ ಮಾಡುವವನು, ದಾನ ತೆಗೆದುಕೊಂಡ ಬ್ರಾಹ್ಮಣನನ್ನು ಕಷ್ಟದಲ್ಲಿ ಬೀಳಿಸುತ್ತಾನೆ. ಅಂತಹ ಹಸುವನ್ನು ಪಡೆದವನಿಗೆ ಯಾವ ಸುಖವೂ ಆಗುವುದಿಲ್ಲ. ಕಾರಣ ಈ ತರಹದ ಹಸುವನ್ನು ದಾನಕೊಡುವವನು ಅಂಧಕಾರಮಯವಾದ ನರಕದಲ್ಲಿ ಬೀಳುತ್ತಾನೆ [10].

ಹಾಲುಕೊಡುವ, ವಸ್ತ್ರದಿಂದ ಆಚ್ಛಾದಿತವಾದ, ಕರುವಿನಿಂದ ಕೂಡಿದ ಕಪಿಲಾ ಧೇನುವನ್ನು ದಾನಮಾಡುವವನು ಬ್ರಹ್ಮಲೋಕದಲ್ಲಿ ಸಮ್ಮಾನಿತನಾಗುತ್ತಾನೆ. ಹಾಗೆಯೇ ಕರುವಿನಿಂದ ಕೂಡಿದ ಕೆಂಪು ಹಸು ದಾನಮಾಡುವವನು ಸೂರ್ಯಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ಮಿಶ್ರವರ್ಣದ ಹಸು ದಾನಮಾಡುವವನು ಚಂದ್ರಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ಬಿಳಿ ವರ್ಣದ ಹಸು ದಾನಮಾಡುವವನು ಇಂದ್ರ ಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ಕಪ್ಪು ಹಸು ದಾನಮಾಡುವವನು ಅಗ್ನಿಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ಧೂಮ್ರ ವರ್ಣದ ಹಸು ದಾನಮಾಡುವವನು ಯಮನ ಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ಕಂದು ಹಸು ದಾನಮಾಡುವವನು ವಾಯುಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ಸುವರ್ಣ ವರ್ಣದ ಹಸು ದಾನಮಾಡುವವನು ಕುಬೇರನ ಲೋಕದಲ್ಲಿ, ಹಾಗೆಯೇಕರುವಿನಿಂದ ಕೂಡಿದ ಧೂಮ ವರ್ಣದ ಹಸು ದಾನಮಾಡುವವನು

---

9 ವತ್ಸಲಾಂ ಗುಣಸಂಪನ್ನಾಂ ತರುಣೀಂ ವಸ್ತ್ರ ಸಂಯುತಾಮ್ ।
ದತ್ತ್ವೇದೃಶೀಂ ಗಾಂ ವಿಪ್ರಾಯ ಸರ್ವಪಾಪೈಃ ಪ್ರಮುಚ್ಯತೇ ॥
ಅಸುರ್ಯಾ ನಾಮ ತೇಲೋಕಾ ಗಾಂ ದತ್ವಾ ತಾನ್ನ ಗಚ್ಛತಿ ॥
ಶ್ರೀಮನ್ ಮಹಾಭಾರತ

10 ಪೀತೋದಕಾಂ ಜಗ್ಧತೃಣಾಂ ನಷ್ಟಕ್ಷೀರಾಂ ನಿರಿಂದ್ರಿಯಾಮ್ ।
ಜರಾರೋಗೋಪಸಂಪನ್ನಾಂ ಜೀರ್ಣಾಂ ವಾಪೀಮಿವಾಜಲಾಮ್ ।
ದತ್ವಾ ತಮಃ ಪ್ರವಿಶತಿ ದ್ವಿಜಂ ಕ್ಲೇಶೇನ ಯೋಜಯೇತ್ ॥
ಶ್ರೀಮನ್ ಮಹಾಭಾರತ

ಪಿತೃಗಳ ಲೋಕದಲ್ಲಿ, ಹಾಗೆಯೇ ಕರುವಿನಿಂದ ಕೂಡಿದ ನೀರಿನ ನೊರೆಯಂತೆ ಬಣ್ಣವುಳ್ಳ ಹಸು ದಾನಮಾಡುವವನು ವರುಣನ ಲೋಕದಲ್ಲಿ ಸಮ್ಮಾನಿತನಾಗುತ್ತಾನೆ. ದಾನ ಮಾಡಿದ ಹಸುವಿನ ಶರೀರದಲ್ಲಿ ಎಷ್ಟು ರೋಮಗಳಿರುವವೋ ಅಷ್ಟು ವರ್ಷಗಳು ಗೋದಾನಿಯು ಸ್ವರ್ಗಲೋಕದಲ್ಲಿ ಸಮ್ಮಾನಿತನಾಗಿರುತ್ತಾನೆ [11]. ನಂತರ ಸ್ವರ್ಗದಿಂದ ಅವನು ಚ್ಯುತನಾದರೂ ಮನುಷ್ಯಲೋಕದಲ್ಲಿ ಶ್ರೀಮಂತರ ಮನೆಯಲ್ಲಿ ಹುಟ್ಟುತ್ತಾನೆ.

ಶುಭ್ರ ವರ್ಣದ ಗೋವನ್ನು ಬ್ರಹ್ಮಜ್ಞಾನಿಗೆ ದಾನವಿತ್ತರೆ ಮಾನವನು ಭಾರೀ ಶ್ರೀಮಂತನಾಗುತ್ತಾನೆ. ಸುಖ, ವಿಲಾಸ, ಭೋಗ, ಭಾಗ್ಯಗಳನ್ನು ಪಡೆಯುತ್ತಾನೆ.

ಅಚ್ಚ ಬಿಳಿ ಬಣ್ಣದ ಗೋವು ಈ ಲೋಕದಲ್ಲಿ ಸಿಕ್ಕುವುದು ವಿರಳ. ಆದರೆ ಸುದೈವದಿಂದ ಈ ಬಿಳಿ ಬಣ್ಣದ ಗೋವು ಸಿಕ್ಕು ಅದನ್ನು ದಾನ ಮಾಡಿದ್ದಾದರೆ ಅವನ ಕುಲಕೋಟಿಗೆ ಕಲ್ಯಾಣವಾಗುತ್ತದೆ.

ಆಸನ್ನ ಪ್ರಸವ (ಗೋವು ಈಯುವ ಸಂದರ್ಭದಲ್ಲಿ) ಗೋವು ದಾನ ಮಾಡಿದರೆ ಭೂಮಂಡಲವನ್ನೆಲ್ಲ ದಾನ ಮಾಡಿದ ಪುಣ್ಯ ಪ್ರಾಪ್ತಿಯಾಗುತ್ತದೆ.

ಗೋವಿನ ಕೋಡಿಗೆ ಚಿನ್ನದ ಗೊಣಸು, ಕಾಲಿಗೆ ಬೆಳ್ಳಿಯ ಗೊರಸು, ಮೈಮೇಲೆ ಹೊಸ ಬಟ್ಟೆ, ಹಣೆಯಲ್ಲಿ ಗಂಧ ಹೂಗಳ ಅಲಂಕಾರ, ಮೇಲೆ ಹಾಲು ಕರೆಯುವ ಪಾತ್ರೆ ಇವೆಲ್ಲ ಸಹಿತವಾಗಿ ಕಪಿಲಾ ಗೋದಾನ ಮಾಡಿದ ದಾನಿಗಳು ದಿವ್ಯ ಲೋಕಗಳಲ್ಲಿ ವಾಸಿಸುತ್ತಾರೆ.

ಕರು ಹಾಕಿದ ಹದಿನೈದು ದಿನಗಳೊಳಗಾಗಿ ಚೆನ್ನಾಗಿ ಹಿಂಡುವ ಗೋವನ್ನು ದಾನ ಮಾಡಿದರೆ 'ಭೂದಾನ' ಮಾಡಿದ ಪುಣ್ಯ ಬರುತ್ತದೆ ಸಂದೇಹವಿಲ್ಲ.

ಮನುಷ್ಯನು ಗೋದಾನ ಮಾಡುವುದರಿಂದ ತನ್ನ ಹಿಂದಿನ ಏಳು ತಲೆಮಾರಿನವರನ್ನೂ, ಮುಂದಿನ ಏಳು ತಲೆಮಾರಿನವರನ್ನೂ ಉದ್ಧಾರಮಾಡುತ್ತಾನೆ. ಸುವರ್ಣ ಸಹಿತವಾಗಿ ಗೋದಾನ ಮಾಡುವುದರಿಂದ ಎರಡರಷ್ಟು ಅಂದರೆ ಹಿಂದಿನ ಮತ್ತು ಮುಂದಿನ ಹದಿನಾಲ್ಕು ತಲೆಮಾರಿನವರನ್ನು ಉದ್ಧರಿಸುತ್ತಾನೆ [12].

★

11 ಯಾವಂತಿ ರೋಮಾಣಿ ಭವಂತಿ ಧೇನ್ವಾ
ಸ್ತಾವಂತಿ ವರ್ಷಾಣಿ ಮಹೀಯತೇ ಸಃ ॥
ಸ್ವರ್ಗಚ್ಯುತಶ್ಚಾಪಿ ತತೋ ನೃಲೋಕೇ
ಪ್ರಸೂಯತೇ ವೈ ವಿಪುಲೇ ಗೃಹೇ ಸಃ ॥ ಶ್ರೀಮನ್ಮಹಾಭಾರತ

12 ಗೋಪ್ರದಾನಾತ್ತಾರಯತೇ ಸಪ್ತ ಪೂರ್ವಾಂಸ್ತಥಾ ಪರಾನ್ ।
ಸುವರ್ಣಂ ದಕ್ಷಿಣಾಂ ಕೃತ್ವಾ ತಾವದ್ವಿಗುಣ ಮುಚ್ಯತೇ ॥
ಶ್ರೀಮನ್ಮಹಾಭಾರತ

# ಮರಣ ಕಾಲದಲ್ಲಿ ಗೋದಾನ

'ಜಾತಸ್ಯಹಿ ಧ್ರುವೋ ಮೃತ್ಯುಃ' ಎಂಬ ಗೀತೋಕ್ತಿಯಂತೆ ಹುಟ್ಟಿದವನಿಗೆ ಸಾವು ನಿಶ್ಚಿತ. ಸಾವು ಸಮೀಪಿಸಿದಾಗ ಸಾಯುತ್ತಿರುವ ವ್ಯಕ್ತಿಯು ಐದು ಗೋದಾನಗಳನ್ನು ಮಾಡಬೇಕಾದುದು ಅವಶ್ಯ. ಋಣಧೇನು, ಮೋಕ್ಷಧೇನು, ಪಾಪಧೇನು, ವೈತರಣೀಧೇನು ಹಾಗೂ ಉತ್ಕ್ರಾಂತಿಧೇನು ಎಂಬುದಾಗಿ ಐದು ವಿಧ ಗೋದಾನಗಳನ್ನು ಮಗನು ಕೊಡಿಸಿದ್ದಾದರೆ ಅದು ಗಯಾ ಶ್ರಾದ್ಧಕ್ಕಿಂತಲೂ, ನೂರು ಅಶ್ವಮೇಧಗಳಿಗಿಂತಲೂ ಹೆಚ್ಚು ಫಲಕಾರಿಯೆನಿಸಿದೆ [1].

ಸೂರ್ಯಗ್ರಹಣ, ಸಂಕ್ರಾಂತಿ, ವ್ಯತೀಪಾತಗಳಿಗೆ ಸಮಪರ್ವಕಾಲವೆನಿಸಿದ ಮರಣಕಾಲದಲ್ಲಿ ಗೋದಾನಗಳನ್ನು ಕೊಡಬೇಕು [2].

ಸಾವು ಸಮೀಪಿಸಿದ ವ್ಯಕ್ತಿ ಕರುವಿನ ಜೊತೆ ಗೋವನ್ನು ಸದಕ್ಷಿಣಾಕವಾಗಿ ದಾನ ಮಾಡಬೇಕು [3]. ಸಾಯುವವನು ಅಶಕ್ತನಾಗಿದ್ದರೆ ಅವನ ಪತಿಯಿಂದ ಪುತ್ರನು ಈ ಗೋದಾನಗಳನ್ನು ನೀಡಬೇಕು.

ಒಬ್ಬ ವ್ಯಕ್ತಿ ಸಾಲಗಾರನಾಗಿ ಸತ್ತರೆ ಸಾಲ ತೀರಿಸಲು ಮತ್ತೊಂದು ಜನ್ಮ ಪಡೆಯಬೇಕಾಗುತ್ತದೆ. ಮೋಕ್ಷ ಬಯಸುವ ವ್ಯಕ್ತಿ ತನ್ನ ಎಲ್ಲ ಸಾಲಗಳನ್ನು ತೀರಿಸಿಕೊಳ್ಳಬೇಕು. ಸಾಲ ತೀರಿಸುವ ಉದ್ದೇಶದಿಂದ ತನ್ನ ಋಣಮುಕ್ತಿಗಾಗಿ ನೀಡುವ ಗೋದಾನಕ್ಕೆ ಋಣಧೇನು ದಾನವೆಂದು ಹೆಸರು.

'ಈ ಒಂದು ಗೋವನ್ನು ದಾನಕೊಡುವುದರಿಂದ ನನ್ನ ಜನ್ಮ, ಜನ್ಮಾಂತರದ ಋಣವೆಲ್ಲ ತೀರಿ ಹೋಗಲಿ' ಎಂದು ಪ್ರಾರ್ಥಿಸುತ್ತ ಈ ಗೋದಾನ ನೀಡಬೇಕು [4].

'ಈ ಗೋದಾನ ಕೊಡುವುದರಿಂದ ಮುಕುಂದನು ಪ್ರೀತನಾಗಿ ನನಗೆ ಮೋಕ್ಷವನ್ನು ಕೊಡಲಿ' ಎಂದು ಪ್ರಾರ್ಥಿಸುತ್ತ 'ಮೋಕ್ಷಧೇನು' ದಾನ ನೀಡಬೇಕು[5].

---

1 ಮುಮೂರ್ಷುಂ ಪಿತರಂ ಪುತ್ರೋ ಯದಿದಾನಂ ಪ್ರದಾಪಯೇತ್ ।
ತದ್ವಿಶಿಷ್ಟಂ ಗಯಾ ಶ್ರಾದ್ಧಾದಶ್ವಮೇಧ ಶತಾದಪಿ ॥ ಪುರಾಣ ವಚನ

2 ವ್ಯತೀಪಾತೋಽಥ ಸಂಕ್ರಾಂತಿಸ್ತಥೈವ ಗ್ರಹಣಂ ರವೇಃ ।
ಪುಣ್ಯಕಾಲಾಸ್ತಥಾ ಸರ್ವೇ ಯದಾ ಮೃತ್ಯುರುಪಸ್ಥಿತಃ ॥

3 ಆಸನ್ನಮೃತ್ಯುನಾ ದೇಯಾ ಗೌಃ ಸವತ್ಸಾತು ಪೂರ್ವವತ್ ।

4 ಐಹಿಕಾಮುಷ್ಮಿಕಂ ಯಚ್ಚ ಸಪ್ತಜನ್ಮಾರ್ಜಿತಂ ಋಣಂ ।
ತತ್ಸರ್ವಂ ಶುದ್ಧಿಮಾಯಾತು ಗಾಮೇಕಾಂ ದದತೋಮಮ ॥

5 ಮೋಕ್ಷಂ ದೇಹಿ ಹೃಷಿಕೇಶ ಮೋಕ್ಷಂ ದೇಹಿ ಜನಾರ್ದನ ।
ಮೋಕ್ಷಧೇನು ಪ್ರದಾನೇನ ಮುಕುಂದಃ ಪ್ರೀಯತಾಂ ಮಮ ॥

ಋಣ ತೀರಿಸಿಕೊಂಡ ವ್ಯಕ್ತಿ ತನ್ನನ್ನು ಪಾಪಗಳಿಂದ ಮುಕ್ತಗೊಳಿಸಿಕೊಳ್ಳಬೇಕು. ಅದಕ್ಕಾಗಿ ಪಾಪಧೇನು ದಾನ ನೀಡಬೇಕು. 'ನನ್ನ ತ್ರಿಕರಣಗಳಿಂದ ಘಟಿಸಿದ ಪಾಪಗಳನ್ನು ನಾಶಮಾಡು' ಎಂದು ಪ್ರಾರ್ಥಿಸುತ್ತ ದಾನ ನೀಡಬೇಕು [6].

ಮೃತ್ಯುದೇವತೆಯಾದ ಯಮನ ಪ್ರೀತಿಗಾಗಿ ವೈತರಣಿಯೆಂಬ ನದಿಯನ್ನು ದಾಟುವುದಕ್ಕಾಗಿ ವೈತರಣೀಧೇನು ದಾನ ನೀಡಬೇಕು. 'ಯಮದ್ವಾರಪಥದಲ್ಲಿ ಸಿಗುವ ಘೋರ ವೈತರಣೀ ನದಿಯನ್ನು ದಾಟುವುದಕ್ಕಾಗಿ ಗೋವನ್ನು ದಾನ ನೀಡುತ್ತಿದ್ದೇನೆ' ಎಂದು ಪ್ರಾರ್ಥಿಸುತ್ತ ಈ ಗೋದಾನ ನೀಡಬೇಕು [7]. (ಕಪ್ಪು ಆಕಳು ಸಿಕ್ಕದಿದ್ದರೆ ಇತರ ಗೋವುಗಳನ್ನು ದಾನ ನೀಡಬಹುದು).

"ಸುಖ ಮರಣಕ್ಕಾಗಿ ಅನಾಯಾಸ ಪ್ರಾಣೋತ್ಕ್ರಾಂತಿಗಾಗಿ ಉತ್ಕ್ರಾಂತಿಧೇನುವನ್ನು ದಾನ ನೀಡಬೇಕು. 'ಪ್ರಾಣೋತ್ಕ್ರಮಣದ ಈ ಸ್ಥಿತಿಯಲ್ಲಿ ಸುಖಮರಣಕ್ಕಾಗಿ ಉತ್ಕ್ರಾಂತಿ ಎಂಬ ಹೆಸರಿನ ಈ ಧೇನುವನ್ನು ದಾನ ನೀಡುತ್ತಿದ್ದೇನೆ"ಎಂದು ಪ್ರಾರ್ಥಿಸುತ್ತ ದಾನ ನೀಡಬೇಕು [8].



---

6 ಆಜನ್ಮೋಪಾರ್ಜಿತಂ ಪಾಪಂ ಮನೋವಾಕ್ಕಾಯಕರ್ಮಭಿಃ ।
ತತ್ಸರ್ವಂ ನಾಶಮಾಯಾತು ಗೋಪ್ರದಾನೇನ ಕೇಶವ ॥

7 ವಿಷ್ಣುರೂಪ ದ್ವಿಜಶ್ರೇಷ್ಠ ಭೂದೇವ ದ್ವಿಜ ಪಾವನ ।
ತರ್ತುಂ ವೈತರಣೀಮೇತಾಂ ಕೃಷ್ಣಾಂ ಗಾಂ ಪ್ರದದಾಮ್ಯಹಂ ॥

ಗರುಡ ಪುರಾಣ

8 ಅಸೂತ್ಕ್ರಾಂತೌ ಪ್ರವೃತ್ತಸ್ಯ ಸುಖೋತ್ಕ್ರಮಣ ಸಿದ್ಧಯೇ ।
ತುಭ್ಯಮೇನಾಂ ಸಂಪ್ರದದೇ ಧೇನುಮುತ್ಕ್ರಾಂತಿ ಸಂಜ್ಞಿಕಾಮ್ ॥

# ಗೋದಾನ ವಿಧಿ-ವಿಧಾನ

ಗೋದಾನ ಮಾಡುವವನು ದಾನ ಮಾಡುವುದಕ್ಕೆ ಮೊದಲು ಮೂರು ರಾತ್ರಿಗಳಲ್ಲಿ ಉಪವಾಸದಿಂದಿದ್ದು ಕೇವಲ ಜಲಾಹಾರಿಯಾಗಿರಬೇಕು. ನೆಲದ ಮೇಲೆ ಮಲಗಿಕೊಳ್ಳಬೇಕು. ದಾನ ಕೊಡುವ (ಹಸು) ಗೋವುಗಳನ್ನು ಹುಲ್ಲು, ನೀರು, ಹಿಂಡಿ ಮೊದಲಾದವುಗಳಿಂದ ತೃಪ್ತಿಪಡಿಸಬೇಕು ಮತ್ತು ಅವುಗಳ ಸೇವೆ ಮಾಡಬೇಕು. ದಾನಕೊಡುವದಿನ ಸತ್ಪಾತ್ರನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಿ ತೃಪ್ತಿಪಡಿಸಿ ಅನಂತರ ಗೋವುಗಳನ್ನು ಹಾಲು ಕುಡಿಯುವ ಪುಷ್ಟವಾದ ಕರುಗಳೊಡನೆ ದಾನ ಮಾಡಿ ಪುನಃ ಮೂರು ದಿವಸ ಹಾಲನ್ನು ಮಾತ್ರ ಸೇವಿಸಬೇಕು[1].

**ಗೋದಾನ ಪ್ರಯೋಗ :**

ಸಂಕಲ್ಪ - ಆಚಮ್ಯ, ಪ್ರಾಣಾನಾಯಮ್ಯ, ದೇಶ ಕಾಲೌ ಸಂಕೀರ್ತ್ಯ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಗರ್ವಾಂತಯಾಮಿ ಶ್ರೀಗೋಪಾಲಕೃಷ್ಣ ಪ್ರೇರಣಯಾ ಶ್ರೀ ಗೋಪಾಲಕೃಷ್ಣ ಪ್ರೀತ್ಯರ್ಥಂ ಸಕಲ ಪಾಪ ನಿರಸನದ್ವಾರಾ ಪುಣ್ಯಲೋಕ ಪ್ರಾಪ್ತ್ಯರ್ಥಂ ಯಥಾಶಕ್ತಿ, ಯಥಾಜ್ಞಾನಂ, (ದಾನಕಲ್ಪೋಕ್ತ ಫಲಾವಾಪ್ತಯೇ) ಗೋದಾನಂ ಕರಿಷ್ಯೇ ॥

ದಾನ ಸ್ವೀಕರಿಸಲು ಬಂದ ಬ್ರಾಹ್ಮಣನನ್ನು, ಗೋವನ್ನು, ವಸ್ತ್ರಾಂಕಾರಗಳಿಂದ ಪೂಜಿಸಿ, ನಂತರ ಬ್ರಾಹ್ಮಣನ ತಲೆಯ ಮೇಲೆ ಮಂತ್ರಾಕ್ಷತೆಗಳನ್ನು ಹಾಕಿ, ಓಂ ನಮೋ ನಾರಾಯಣಾಯ ನಾರಾಯಣಮ್ ಆವಾಹಯಾಮಿ ಎಂದು ಆವಾಹಿಸಿ, ಬ್ರಾಹ್ಮಣನ ಪಾದ ತೊಳೆದು ಆಸನ, ಅರ್ಘ್ಯ, ಪುಷ್ಪಾದಿಗಳಿಂದ ಪೂಜಿಸಬೇಕು.

ನಂತರ ಗೋವಿನಲ್ಲಿ ದೇವತಾ ಆವಾಹನೆಯನ್ನು ಮಾಡಬೇಕು. ಪೂಜೆ ಮಾಡಬೇಕು.

1) ಶೃಂಗಮೂಲೇಷು ಬ್ರಹ್ಮವಿಷ್ಣುಭ್ಯಾಂ ನಮಃ ।
2) ಶೃಂಗಾಗ್ರೇ ಸರ್ವ ತೀರ್ಥೇಭ್ಯೋ ನಮಃ ।
3) ಶಿರೋಮಧ್ಯೇ ಶಿವಾಯ ನಮಃ ।
4) ಲಲಾಟೇ ದೇವ್ಯೈನಮಃ ।
5) ನಾಸಿಕಾಯಾಂ ಷಣ್ಮುಖಾಯನಮಃ ।
6) ನಾಸಾಪುಟಯೋಃ ಕಂಬಲಾಶ್ವತರನಾಗಾಭ್ಯಾಂ ನಮಃ ।

---

1 ತಿಸ್ರೋರಾತ್ರೀಸ್ತ್ವದ್ಭಿರುಪೋಷ್ಯಭೂಮೌ
ತೃಪ್ತಾಗಾವಸ್ತರ್ಪಿತೇಭ್ಯಃ ಪ್ರದೇಯಾಃ ।
ವತ್ಸೈಃ ಪುಷ್ಟೈಃ ಕ್ಷೀರಪೈಃ ಸುಪ್ರಚಾರಾ
ಸ್ತ್ರ್ಯಹಂ ದತ್ತ್ವಾ ಗೋರಸೈರ್ವರ್ತಿತವ್ಯಮ್ ॥ ಶ್ರೀಮನ್‌ಮಹಾಭಾರತ.

7) ಕರ್ಣಯೋರಶ್ವಿಭ್ಯಾಂ ನಮಃ ।
8) ಚಕ್ಷುಷೋಃ ಶಶಿ ಭಾಸ್ಕರಾಭ್ಯಾಂ ನಮಃ ।
9) ದಂತೇಷು ವಾಯವೇ ನಮಃ ।
10) ಜಿಹ್ವಾಯಾಂ ವರುಣಾಯ ನಮಃ ।
11) ಹುಂಕಾರೇ ಸರಸ್ವತ್ಯೈ ನಮಃ ।
12) ಗಂಡಯೋಃ ಪಕ್ಷಮಾಸಾಭ್ಯಾಂ ನಮಃ ।
13) ಓಷ್ಠಯೋಃ ಸಂಧ್ಯಾಭ್ಯಾಂ ನಮಃ ।
14) ಗ್ರೀವಾಯಾಂ ಇಂದ್ರಾಯ ನಮಃ ।
15) ಕುಕ್ಷಿದೇಶೇ ರಕ್ಷೋಭ್ಯೋ ನಮಃ ।
16) ಉರಸಿ ಸಾಧ್ಯೇಭ್ಯೋ ನಮಃ ।
17) ಜಂಘಾಸು ಧರ್ಮಾಯ ನಮಃ ।
18) ಖುರ ಮಧ್ಯೇ ಗಂಧರ್ವೇಭ್ಯೋ ನಮಃ ।
19) ಖುರಾಗ್ರೇ ಪನ್ನಗೇಭ್ಯೋ ನಮಃ ।
20) ಖುರಪಶ್ಚಿಮಾಗ್ರೇ ಅಪ್ಸರೋಭ್ಯೋ ನಮಃ ।
21) ಪೃಷ್ಟೇ ಏಕಾದಶರುದ್ರೇಭ್ಯೋ ನಮಃ ।
22) ಸರ್ವ ಸಂಧಿಷು ವಸುಭ್ಯೋ ನಮಃ ।
23) ಶ್ರೋಣೀ ತಟೇ ಪಿತೃಭ್ಯೋ ನಮಃ ।
24) ಲಾಂಗೂಲೇ ಸೋಮಾಯ ನಮಃ ।
25) ಗುಹ್ಯೇ ಆದಿತ್ಯರಶ್ಮಿಭ್ಯೋ ನಮಃ ।
26) ಗೋಮೂತ್ರೇ ಗಂಗಾಯೈ ನಮಃ ।
27) ಗೋಮಯೇ ಯಮುನಾಯೈ ನಮಃ ।
28) ಕ್ಷೀರೇ ಸರಸ್ವತ್ಯೈ ನಮಃ ।
29) ದಧ್ನಿ ನರ್ಮದಾಯೈ ನಮಃ ।
30) ಘೃತೇ ಅಗ್ನಯೇ ನಮಃ ।
31) ರೋಮಸು ಅಷ್ಟಾವಿಂಶತಿ ದೇವಕೋಟಿಭ್ಯೋ ನಮಃ ।
32) ಉದರೇ ಪೃಥಿವ್ಯೈ ನಮಃ ।
33) ಪಯೋಧರೇಷು ಚತುಃ ಸಮುದ್ರೇಭ್ಯೋ ನಮಃ ।

ಏತಾದೇವತಾ ಅಂಗೇಷು ಸಂಪೂಜ್ಯ –

ಅದ್ಯಪೂರ್ವೋಚ್ಚರಿತ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ...... ಶ್ರೀ ವಿಷ್ಣುಪ್ರೀತ್ಯರ್ಥಂ ಅಮುಕ ಗೋತ್ರಾಯ ಅಮುಕ ಶರ್ಮಣೇ ಸುಪೂಜಿತಾಯ ಪೃಥ್ವೀದಾನ ಸಮಫಲಕಾಮಃ ಸರ್ವ ಪಾಪಕ್ಷಯಕಾಮೋ, ವಿಷ್ಣು ಪ್ರೀತಿಕಾಮೋ ವಾ ಇಮಾಂ ಪ್ರತ್ಯಕ್ಷಧೇನುಂ ಸುವರ್ಣ ಶೃಂಗೀಂ, ರೌಪ್ಯಖುರಾಂ, ತಾಮ್ರ ಪೃಷ್ಠೀಂ, ಘಂಟಾ ಚಾಮರ ಭೂಷಿತಾಂ, ಸುವಸ್ತ್ರಾಚ್ಛನ್ನಾಂ, ತುಭ್ಯಮಹಂ ಸಂಪ್ರದದೇ ನ ಮಮ ॥

ಕರು ಸಹಿತವಾದ ಗೋವನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ, ದಾನ ಮಾಡುವವನು ಗೋವಿನ ಬಾಲದ ಹತ್ತಿರ ಪೂರ್ವಾಭಿಮುಖವಾಗಿ ನಿಂತು, ತುಪ್ಪದ ಪಾತ್ರೆಯಲ್ಲಿ ಗೋವಿನ ಬಾಲವನ್ನು ಇರಿಸಿ, ತಿಲಸಹಿತವಾದ ದರ್ಭೆಯನ್ನು ಹಾಗೂ ತುಪ್ಪದಿಂದ ಒದ್ದೆಯಾದ ಬಾಲವನ್ನು ಬ್ರಾಹ್ಮಣನ ಕೈಯಲ್ಲಿಟ್ಟು ಈ ಮಂತ್ರ ಹೇಳಬೇಕು.

ಯಜ್ಞಸಾಧನ ಭೂತಾಯಾ ವಿಶ್ವಸ್ಯಾಘೌಘ ವಿನಾಶಿನೀ ।
ವಿಶ್ವರೂಪಧರೋ ದೇವಃ ಪ್ರೀಯತಾಮನಯಾಗವಾ ॥

ತತೋ ದಾತಾ ದಾನ ಪ್ರತಿಷ್ಠಾ ಸಿದ್ಧ್ಯರ್ಥಂ ಸುವರ್ಣಂ ದಕ್ಷಿಣಾಂ ದತ್ವಾ ಪ್ರಾರ್ಥಯೇತ್।

ನಮೋ ಗೋಭ್ಯಃ ಶ್ರೀಮತಿಭ್ಯಃ ಸೌರಭೇಯಿಭ್ಯ ಏವಚ ।
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ।
ಪೂಜಿತಾಸಿ ವಸಿಷ್ಠೇನ ವಿಶ್ವಾಮಿತ್ರೇಣಧೀಮತಾ ।
ಸುರಭೇ ಹರಮೇ ಪಾಪಂ ಯನ್ಮಯಾದುಷ್ಕೃತಂ ಕೃತಮ್ ॥
ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥

ಈಗ ಗೋವು ಮತ್ತು ಬ್ರಾಹ್ಮಣನನ್ನು ಪ್ರದಕ್ಷಿಣೆ ಹಾಕಿ ನಮಸ್ಕರಿಸಬೇಕು. ಗೋದಾನದ ನಂತರ ಬ್ರಾಹ್ಮಣ ಸಹಿತನಾಗಿ ಗೋವನ್ನು ನಾಲ್ಕು ಹೆಜ್ಜೆ ನಡೆಸಿ ನಂತರ ಗೋಮತೀ ಜಪವನ್ನು 'ನಮೋಗೋಭ್ಯಃ ..... ಪವಿತ್ರಾಭ್ಯೋ ನಮೋ ನಮಃ ॥ ಮಂತ್ರದಿಂದ ಯಥಾಶಕ್ತಿ ಮಾಡಬೇಕು.

ಅನೇನ ಗೋದಾನೇನ ಗರ್ವಾಂತರ್ಯಾಮಿ ಶ್ರೀ ಗೋಪಾಲಕೃಷ್ಣಃ ಪ್ರೀಯತಾಂ ಹೇಳಬೇಕು. ಬ್ರಾಹ್ಮಣನು ಪ್ರತಿಗೃಹ್ಣಾಮಿ ಓಂ ಸ್ವಸ್ತಿ ಹೇಳಬೇಕು.

ಶ್ರೀಕೃಷ್ಣಾರ್ಪಣಮಸ್ತು

(ದ್ವಿರಾಚಾಮೇತ್).



# ಉಭಯಮುಖೀ ಕಪಿಲಾಗೋದಾನ

ಶ್ರೀವರಾಹದೇವರು ಭೂದೇವಿಯನ್ನು ಕುರಿತು ಹೇಳುತ್ತಾರೆ. ಭೂದೇವಿಯೇ! ಹೋಮಹವನಗಳಿಗಾಗಿ, ಅಗ್ನಿಹೋತ್ರದ ಸಲುವಾಗಿ, ಭಗವಂತನ ಪಂಚಾಮೃತ ಅಭಿಷೇಕಕ್ಕಾಗಿ ಉಪಯುಕ್ತವಾದ ಧೇನುವಿಗೆ 'ಕಪಿಲಾಧೇನು' ಎನ್ನುತ್ತಾರೆ. ಬ್ರಹ್ಮದೇವರು ಎಲ್ಲ ತೇಜೋದ್ರವ್ಯಗಳನ್ನು ಕೂಡಿಸಿ 'ಕಪಿಲಾಧೇನು'ವನ್ನು ನಿರ್ಮಿಸಿದ್ದಾನೆ. ಈ ಕಪಿಲೆಯು ಪವಿತ್ರಗಳಲ್ಲಿ ಅತ್ಯಂತ ಪವಿತ್ರ. ಮಂಗಳಗಳಲ್ಲಿ ಪರಮ ಮಂಗಳ. ಈ ಕಪಿಲಾಧೇನುಗಳು ಮಾನವರನ್ನು ಉದ್ಧಾರ ಮಾಡುವುದರಲ್ಲಿ ಸಂಶಯವಿಲ್ಲ.

ಒಂದು ಕೋಟಿ ಬೇರೆ ಹಸುಗಳನ್ನು ದಾನ ಕೊಡುವುದಕ್ಕಿಂತ ಒಂದು ಕಪಿಲಾ ಗೋದಾನವು ಪ್ರಶಸ್ತವಾಗಿದೆ. ಕಪಿಲಾಧೇನುವು ಗರ್ಭಿಣಿಯಾದ ಬಳಿಕ ಅದರ ಪ್ರಸವ ಕಾಲವನ್ನು ನಿರೀಕ್ಷಿಸುತ್ತಿರಬೇಕು. ಕಪಿಲೆಯು ಈಯುವ ಹೊತ್ತಿನಲ್ಲಿ ತಾಯಿಯ ಗರ್ಭದಿಂದ ಕರುವಿನ ಮೋರೆಯು ಹೊರಗೆ ಬಂದಾಗ ಆ ಕಪಿಲೆಗೆ ಎರಡು ಮುಖಗಳು ಇದ್ದಂತಾಗಿ ಅದು 'ಉಭಯಮುಖೀ ಗೋವು' ಎನಿಸುತ್ತದೆ.

ಹೀಗೆ ಕರು ಅರ್ಧ ಹೊರಬಂದಾಗ ಆ ಧೇನುವು ಭೂದೇವಿ ಇದ್ದಂತೆ. ಆ ವೇಳೆಯಲ್ಲಿ ವೇದಾಧ್ಯಯನ ಮಾಡಿದ ಯೋಗ್ಯ ಮನುಷ್ಯನಿಗೆ ಚಿನ್ನದ ಕೊಂಬು, ಬೆಳ್ಳಿಯ ಗೊರಸುಗಳಿಂದ ಸಹಿತವಾಗಿ ಆ ಉಭಯಮುಖೀ ಗೋವನ್ನು ಪೂಜಿಸಿ ದಕ್ಷಿಣೆ ಇತ್ತು ದಾನ ಕೊಟ್ಟರೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಈ ದಾನದಿಂದ ಮಾನವನ ಸಕಲ ಪಾಪಗಳೂ ಪರಿಹಾರವಾಗುತ್ತವೆ.

ಈ ಉಭಯಮುಖಿ ಗೋವನ್ನು ದಾನ ಕೊಡುವವನು ಆ ದಿನ ಬರೀ ಹಾಲು ಅಥವಾ ಪಾಯಸ ಭಕ್ಷಣ ಮಾಡಿ ಉಪವಾಸ ಮಾಡಬೇಕು. ಇಂಥ ಉಭಯ ಮುಖೀ ಗೋವನ್ನು ದಾನ ಮಾಡಿದರೆ ಸಪ್ತದ್ವೀಪಗಳಿಂದ ಸಹಿತವಾದ ಸಮಗ್ರ ಭೂಮಂಡಲವನ್ನು ದಾನ ಮಾಡಿದಷ್ಟೇ ಪುಣ್ಯ ಬರುತ್ತದೆ.

ಅತ್ಯಂತ ಪುಣ್ಯಕರವಾದ ಈ ದಾನ ಕೊಡುವಾಗ ದಾನಿಯು

ಇಮಾಂ ಗೃಹಾಣೋಭಯಮುಖೀಂ ಗಾಂ ಉಭಯತ್ರ ಶಮೋಽಸ್ತುತೇ ॥
ದದೇ ವಂಶ ವಿವೃದ್ಧ್ಯರ್ಥಂ ಸದಾ ಸ್ವಸ್ತಿಕರೀ ತವ ॥

ಎಂಬ ಮಂತ್ರವನ್ನು ಹೇಳಿ ಯಥಾ ಶಕ್ತಿ ಬಂಗಾರದ ನಾಣ್ಯವನ್ನು ದಕ್ಷಿಣೆ ಕೊಡಬೇಕು.

ಇನ್ನು ದಾನ ತೆಗೆದುಕೊಳ್ಳುವವನು ಕೂಡ

ಪ್ರತಿಗೃಹ್ಣಾಮಿ ತ್ವಾಂ ಧೇನೋ ಕುಟುಂಬಾರ್ಥೇ ವಿಶೇಷತಃ ।
ಶುಭಂಭವತು ಮೇ ನಿತ್ಯಂ ದೇವಧಾತ್ರೀ ನಮೋಽಸ್ತುತೇ ॥
ಮೇ ನಿತ್ಯ ಸ್ವಸ್ತಿ ಭವತು ರುದ್ರಾಂಗೇತಿ ನಮೋ ನಮಃ ।

ಓಂ ದ್ಯೌ ಸ್ತ್ವಾ ದದಾತು ಪೃಥಿವೀ ತ್ವಾ ಪ್ರತಿಗೃಹ್ಣಾತು ॥

ಎಂಬಮಂತ್ರಗಳನ್ನು ಹೇಳಿ ಆ ಕಪಿಲಾ ಗೋವನ್ನು ದಾನವಾಗಿ ಸ್ವೀಕರಿಸಬೇಕು.

ಅಯೋಗ್ಯರಿಂದ ಈ ಕಪಿಲೆಯು ದಾನವನ್ನು ಸ್ವೀಕರಿಸಬಾರದು. ಸರಿತ್ತುಗಳಲ್ಲಿ ಗಂಗೆಯು ಹೇಗೆ ಶ್ರೇಷ್ಠಳೋ ಹಾಗೆಯೇ ಕಪಿಲಾಧೇನುವು ಗೋವುಗಳಲ್ಲಿ ಶ್ರೇಷ್ಠವಾದುದು [1].



1 ಯಥಾ ಹಿ ಗಂಗಾ ಸರಿತಾಂ ವರಿಷ್ಠಾ ತಥಾರ್ಜುನೀನಾಂ ಕಪಿಲಾ ವರಿಷ್ಠಾ ॥

ಶ್ರೀಮನ್ಮಹಾಭಾರತ.

# ಗುಡಧೇನು, ತಿಲಧೇನು ಇತ್ಯಾದಿ ದಾನಗಳು,

## 1) ಗುಡಧೇನುದಾನ - ( ಬೆಲ್ಲದ ಗೋದಾನ )

ಗುಡಧೇನುವಿನ ದಾನವು ಸರ್ವಮನೋರಥಗಳನ್ನು ಪೂರ್ಣ ಮಾಡುವದು. ಸಾರಿಸಿದ ನೆಲದ ಮೇಲೆ ಕೃಷ್ಣಾಜಿನ, ದರ್ಭೆಗಳನ್ನು ಹಾಸಿ ಬೆಲ್ಲದಿಂದ ಆಕಳು, ಕರುಗಳನ್ನು ಮಾಡಿ ಅದಕ್ಕೆ ಬಂಗಾರ, ಮುತ್ತು, ರತ್ನ, ಬೆಳ್ಳಿ, ತಾಮ್ರ ಮುಂತಾದವುಗಳಿಂದ ಕಣ್ಣು, ಕಿವಿ, ಕೈಕಾಲು ಮುಂತಾದವುಗಳನ್ನು ಮಾಡಬೇಕು. ನಾಲ್ಕು ಭಾರ ಅಥವಾ ಎರಡು ಭಾರ, ಕನಿಷ್ಠ ಒಂದು ಭಾರ ತೂಕದ ಗೋವನ್ನು ಬಗೆಬಗೆಯ ಹಣ್ಣುಕಾಯಿಗಳಿಂದ ಅಲಂಕರಿಸಿ ವೇದ ಓದಿದ ಬ್ರಾಹ್ಮಣನಿಗೆ ದಾನಕೊಟ್ಟು ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ದಾನ ಕೊಡುವವನು ಪೂರ್ವಕ್ಕೆ ಮುಖಮಾಡಿ,

ಗುಡಧೇನೋ ಮಹಾವೀರ್ಯೋ ಸರ್ವಸಂಪತ್ಪ್ರದೇ ಶುಭೇ ।
ದಾನಾದಸ್ಮಾಚ್ಚ ಭೋ ದೇವಿ ಭಕ್ಷ್ಯಭೋಜ್ಯಂ ಪ್ರಯಚ್ಛಮೇ ॥
ವಾಚಾಕೃತಂ ಕರ್ಮಕೃತಂ ಮನಸಾಯದ್ವಿಚಿಂತಿತಂ ।
ಮಾನಕೂಟಂ ತುಲಾಕೂಟಂ ಕನ್ಯಾಗೋಽರ್ಥೇ ಉದಾಹೃತಂ ॥
ಅನೃತಂ ನಾಶಮಾಯಾತು ಗುಡಧೇನೋ ದ್ವಿಜಾರ್ಪಿತೇ ॥

ಎಂಬ ಮಂತ್ರವನ್ನು ಹೇಳಿ ಬ್ರಾಹ್ಮಣನಿಗೆ ಕೊಟ್ಟು ಎಲೇ ! ಬೆಲ್ಲದಗೋವೇ! ಈ ನಿನ್ನದಾನದಿಂದ ನಾನು ಈ ವರೆಗೆ ಮಾತಿನಿಂದ, ಮನಸ್ಸಿನಿಂದ, ಕೃತಿಯಿಂದ ಮಾಡಿದ ಪಾಪವೂ, ತೂಕ ಅಳತೆಯಲ್ಲಿ ನಾನು ಮಾಡಿದ ಮೋಸವೋ, ಹೆಣ್ಣಿಗಾಗಿ ಅಥವಾ ಬೇರೆ ಕಾರ್ಯಕ್ಕಾಗಿ ನಾನು ಹೇಳಿದ ಸುಳ್ಳು, ಇವುಗಳಿಂದ ಬಂದ ನನ್ನ ಪಾಪವನ್ನೆಲ್ಲ ಪರಿಹರಿಸು. ನನಗೆ ಸರ್ವ ಸಂಪದ ಸೌಭಾಗ್ಯಗಳನ್ನು ಕೊಡು. ಈ ದಾನದಿಂದ ನನಗೆ ಭಕ್ಷ್ಯಭೋಜ್ಯಗಳು ದೊರಕಲಿ ಎಂದು ಪ್ರಾರ್ಥಿಸಬೇಕು.

## 2) ತಿಲಧೇನುದಾನ ( ಎಳ್ಳಿನ ಗೋದಾನ )

ತಿಲಧೇನು ಎಂದರೆ ಎಳ್ಳಿನಿಂದ ರಚಿಸಿದ ಆಕಳು ಎಂದರ್ಥವು. 64 ಸೊಲಿಗೆ ಎಳ್ಳಿನಿಂದ ಒಂದು ಆಕಳನ್ನು, 16 ಸೊಲಿಗೆ ಎಳ್ಳಿನಿಂದ ಒಂದು ಕರುವನ್ನು ರಚಿಸಬೇಕು. ಈ ಎಳ್ಳಿನ ಹಸುವಿನ ಮೂಗನ್ನು ಗಂಧದಿಂದಲೂ, ನಾಲಿಗೆಯನ್ನು ಬೆಲ್ಲದಿಂದಲೂ, ಬಾಲವನ್ನು ಗಂಟೆಯಿಂದಲೂ, ಕೊಂಬುಗಳನ್ನು ಚಿನ್ನದಿಂದಲೂ ಮಾಡಿ ಆಲಂಕರಿಸಿ ಅದರ ಮೇಲೆ ಕೃಷ್ಣಾಜಿನವನ್ನು ಹೊದಿಸಿ ಮಂತ್ರೋಕ್ತವಿಧಿಯಿಂದ ಅದನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು.

ಅನ್ನಂ ಮೇ ಜಾಯತಾಮನ್ಯತ್ಪಾನಂ ಸರ್ವರಸಾಸ್ತಥಾ ।
ಸರ್ವ ಸಂಪಾದಯಾಸ್ಮಾಕಂ ತಿಲಧೇನೋ ದ್ವಿಜಾರ್ಪಿತೇ ॥

ಬ್ರಾಹ್ಮಣನಿಗೆ ದಾನವಾಗಿ ಕೊಡಲ್ಪಟ್ಟ ತಿಲಧೇನುವೇ, ನನಗೆ ಅನ್ನವೂ, ನೀರೂ, ಸರ್ವರಸಗಳೂ ದೊರೆಯಲಿ. ನನಗೆಲ್ಲವನ್ನು ದೊರಕಿಸಿಕೊಡು ಎಂಬುದಾಗಿ ದಾನ ಮಾಡುವವನು ಹೇಳಬೇಕು.

ಗೃಹ್ಣಾಮಿ ದೇವಿ ತ್ವಾಂ ಭಕ್ತ್ಯಾ ಕುಟುಂಬಾರ್ಥಂ ವಿಶೇಷತಃ ।
ಭಜಸ್ವ ಕಾಮನ್ ಮಾಂ ದೇವಿ ತಿಲಧೇನೋ ನಮೋಽಸ್ತುತೇ ॥

ದೇವಿ! ಮುಖ್ಯವಾಗಿ ಕುಟುಂಬ ರಕ್ಷಣೆಗಾಗಿ ನಿನ್ನನ್ನು ಭಕ್ತಿಯಿಂದ ಆಶ್ರಯಿಸುತ್ತೇನೆ. ತಿಲಧೇನುವೇ ನಿನಗೆ ನಮಸ್ಕಾರ ಎಂಬುದಾಗಿ ದಾನ ತೆಗೆದುಕೊಳ್ಳುವವನು ಹೇಳಬೇಕು. ಇದು ಸರ್ವೇಷ್ಟಲಾಭಗಳನ್ನು ಕೊಡುತ್ತದೆ ಸಂದೇಹವಿಲ್ಲ.

**3) ಜಲಧೇನು ದಾನ ( ನೀರಿನ ಆಕಳದಾನ )**

ಒಂದು ಪುಣ್ಯದಿನದಂದು ವಿಧಿಪೂರ್ವಕವಾಗಿ ಗೋವಿನ ಮೈದೊಗಲಿನ ಅಳತೆಯ ಪ್ರದೇಶವನ್ನು ಗೋಮಯದಿಂದ ಸಾರಿಸಬೇಕು. ಸಾರಿಸಿದ ಮಂಡಲದ ನಟ್ಟ ನಡುವೆ ಒಂದು ಪೂರ್ಣ ಕಲಶವನ್ನು ಇರಿಸಬೇಕು. ಕರ್ಪೂರ ಚಂದನ ಗಂಧಗಳಿಂದ ತುಂಬಿದ ಆ ಪೂರ್ಣಕಲಶವೇ ಆಕಳು ಎಂದು ಭಾವಿಸಿ ಅದರ ಪಕ್ಕದಲ್ಲಿ ಕರುವಿನ ಪ್ರತಿನಿಧಿಯೆಂದು ಮತ್ತೊಂದು ಚಿಕ್ಕಕಲಶ ಸ್ಥಾಪಿಸಬೇಕು. ಪತ್ರ ಪುಷ್ಪಗಳಿಂದ ಅಲಂಕರಿಸಿ ಅದಕ್ಕೆದೂರ್ವಾಂಕುರಗಳನ್ನು ಏರಿಸಿ ಅದರ ಒಳಗೆ ಪಂಚರತ್ನಗಳನ್ನು ಹಾಕಿ ಸುತ್ತಲೂ ನೆಲ್ಲಿಕಾಯಿ, ಹೂ, ಸಾಸಿವೆ ಮತ್ತು ಇತರ ಅನೇಕ ಧಾನ್ಯಗಳನ್ನು ಕಲಶದ ಸುತ್ತಲೂ ಹರಡಿ, ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪಾತ್ರೆಗಳನ್ನು ಇಡಬೇಕು. ಒಂದು ಪಾತ್ರೆಯಲ್ಲಿ ತುಪ್ಪ, ಎರಡನೆಯದರಲ್ಲಿ ಮೊಸರು, ಮೂರನೆಯದರಲ್ಲಿ ಜೇನುತುಪ್ಪ, ನಾಲ್ಕನೆಯದರಲ್ಲಿ ಸಕ್ಕರೆ ಹಾಕಿ ಇಡಬೇಕು.

ಕಲ್ಪಿತವಾದ ಆ ಕಲಶಧೇನುವಿಗೆ ಬಂಗಾರದಿಂದ ಮುಖವನ್ನು, ಕೃಷ್ಣಾಗರುವಿನಿಂದ ಕೊಂಬನ್ನು, ಎಲೆಗಳಿಂದ ಕಿವಿಗಳನ್ನು, ಮುತ್ತುಗಳಿಂದ ಕಣ್ಣು, ತಾಮ್ರದಿಂದ ಪೃಷ್ಠ, ಕಂಚಿನಿಂದ ಮೈ, ದರ್ಭೆಗಳಿಂದ ಕೂದಲು, ಸೂತ್ರದಿಂದ ಬಾಲ, ಕಪ್ಪು ಒಡವೆಯಿಂದ ಗಂಟೆ, ಕಂಬಳಿದಾರದಿಂದ ಹೂ ಮಾಲೆ, ಬೆಲ್ಲದಿಂದ ಬಾಯಿ, ಮುತ್ತಿನ ಚಿಪ್ಪಿನಿಂದ ಹಲ್ಲು, ಸಕ್ಕರೆಯಿಂದ ನಾಲಿಗೆ, ಬೆಣ್ಣೆಯಿಂದ ಮೊಲೆ, ಕಬ್ಬಿನಿಂದ ಕಾಲುಗಳನ್ನು ಕಲ್ಪಿಸಿ ಅದನ್ನು ಕೃಷ್ಣಾಜಿನದ ಮೇಲೆ ಸ್ಥಾಪಿಸಿ, ಹೂ ಗಂಧ ಮಾಲೆಗಳಿಂದ ಪೂಜಿಸಿ, ಕುಟುಂಬಿಯೂ, ವೇದಾಧ್ಯಾಯಿಯೂ ಆದ ಯೋಗ್ಯ ಬ್ರಾಹ್ಮಣನಿಗೆ ದಾನ ಕೊಡಬೇಕು. ಈ ಜಲಧೇನು ದಾನ ಕೊಟ್ಟವನು, ಒಂದು ದಿನ, ತೆಗೆದುಕೊಂಡವನು ಮೂರು ರಾತ್ರಿ ಕೇವಲ ನೀರನ್ನು ಮಾತ್ರ ಕುಡಿದು ಉಪವಾಸವಿರಬೇಕು. ಈ ಜಲಧೇನು ದಾನದಿಂದ ಸೆರೆಕುಡಿದವನು, ತಂದೆಯ ತಲೆ ಕಡಿದವನು, ಬ್ರಾಹ್ಮಣನನ್ನು ಕೊಂದವನು, ಗುರುವಿನ ಮಡದಿಯ ಸೆರಗು ಹಿಡಿದವನು, ಎಲ್ಲರೂ ತಮ್ಮ ಪಾಪಗಳನ್ನು ಕಳೆದುಕೊಂಡು ಸಾಧನ ಪೂರ್ತಿ ನಂತರದಲ್ಲಿ ವಿಷ್ಣುಪದವನ್ನು ಸೇರುವರು.

**4) ರಸಧೇನು ದಾನ :-**

ಸಾರಿಸಿದ ನೆಲದ ಮೇಲೆ ಕೃಷ್ಣಾಜಿನದ ದರ್ಭೆಗಳನ್ನು ಹರವಿ ಅದರಮೇಲೆ ಕಬ್ಬಿನ ಹಾಲಿನಿಂದ ತುಂಬಿದ ಕೊಡವನ್ನು ಇಡಬೇಕು. ಅದನ್ನೇ ಗೋವೆಂದು ತಿಳಿದು

ಅದರ ಪಕ್ಕದಲ್ಲಿ ಕರುವಿನ ಸ್ಥಾನದಲ್ಲಿ ಮತ್ತೊಂದು ಚಿಕ್ಕ ಕಬ್ಬಿನ ಹಾಲಿನಿಂದ ತುಂಬಿದ ಕಲಶವನ್ನಿಡಬೇಕು. ಆ ಕಲಶಧೇನುವಿಗೆ ಕಬ್ಬಿನ ಕಾಲು, ಬೆಳ್ಳಿಯ ಗೊರಸು, ಚಿನ್ನದ ಕೊಂಬು, ವಸ್ತ್ರದ ಬಾಲ, ತುಪ್ಪದ ಮೊಲೆ, ಹೂವಿನ ಗಂಗೆದೊಗಲು, ಸಕ್ಕರೆಯ ಬಾಯಿ, ಹಣ್ಣಿನ ಹಲ್ಲು, ತಾಮ್ರದ ಪುಷ್ಪ ಹೂಗಳರೋಮ, ಮುತ್ತಿನ ಕಣ್ಣುಗಳನ್ನು ಕಲ್ಪಿಸಿ, ಅದರಲ್ಲಿ ಏಳುವಿಧವಾದ ಭತ್ತ ಹಾಕಬೇಕು. ನಾಲ್ಕು ದಿಕ್ಕುಗಳಲ್ಲಿ ದೀಪ ಹಚ್ಚಿಟ್ಟು ಧೂಪ ಹಾಕಬೇಕು. ನಾಲ್ಕು ದಿಕ್ಕುಗಳಲ್ಲಿ ಎಳ್ಳುತುಂಬಿದ ಪಾತ್ರೆಯನ್ನು ಇಡಬೇಕು. ಇಂಥರಸಧೇನುವನ್ನುಮಕ್ಕಳುಳ್ಳ ವೇದಾಧ್ಯಾಯಿಗೆ ದಾನಕೊಡಬೇಕು. ಇದನ್ನುದಾನ ಮಾಡುವವನು, ತೆಗೆದುಕೊಳ್ಳುವವನು ಒಂದು ಹೊತ್ತು ಉಪವಾಸ ಮಾಡಬೇಕು. ಈ ರಸಧೇನು ದಾನದಿಂದ ದಾನ ಮಾಡಿದವನ ಸರ್ವ ಪಾಪಪರಿಹಾರವಾಗಿ ಆವನು ಸ್ವರ್ಗಸೇರುವುದಲ್ಲದೇ ಅವನ ಹಿಂದಿನ ಹತ್ತು ತಲೆ ಮುಂದಿನ ಹತ್ತು ತಲೆಯವರೂ ಕೂಡ ಸ್ವರ್ಗವನ್ನು ಪಡೆಯುತ್ತಾರೆ.

**5) ಸಕ್ಕರೆಯ ಗೋದಾನ :**

ಬೆಲ್ಲದ ಗೋದಾನದಂತೆ, ಸಕ್ಕರೆಯ ಗೋದಾನದಿಂದ ವಿಶೇಷ ಪುಣ್ಯವುಂಟು.

ಸಾರಿಸಿದ ನೆಲದ ಮೇಲೆ ಕೃಷ್ಣಾಜಿನವನ್ನು ಹಾಸಿ, ದರ್ಭೆ ಹರಡಿ ಅದರ ಮೇಲೆ ಸಕ್ಕರೆಯಿಂದ ಗೋವನ್ನು ರಚಿಸಿ ಅದಕ್ಕೆ ಮುಖ, ಕಣ್ಣು, ಕೊಂಬುಗಳನ್ನು ರಚಿಸಿ, ಪಂಚರತ್ನ, ಗಂಧ, ಪುಷ್ಪ, ವಸ್ತ್ರಗಳಿಂದ ಅಲಂಕರಿಸಿ ಬಡ ಬ್ರಾಹ್ಮಣನಿಗೆ ಅದನ್ನು ದಾನಕೊಟ್ಟು ಯಥಾಶಕ್ತಿ ದಕ್ಷಿಣೆ ಕೊಡಬೇಕು.

ಈ ದಾನ ಕೊಟ್ಟವನು ಒಂದು ದಿನ, ತೆಗೆದುಕೊಂಡವನು ಮೂರು ದಿನ ಬರಿ ಸಕ್ಕರೆಯನ್ನೇ ಸ್ವೀಕರಿಸಿ ಇರಬೇಕು.

**6) ಜೇನುಧೇನುದಾನ :**

ಜೇನುತುಪ್ಪದ ಧೇನು ದಾನವು ಸರ್ವಪಾಪ ಪರಿಹಾರಕವಾಗಿದೆ. ಸಾರಿಸಿದ ನೆಲದ ಮೇಲೆ ಕೃಷ್ಣಾಜಿನ, ದರ್ಭೆಗಳನ್ನು ಹಾಸಿ, ಅದರ ಮೇಲೆ ಹದಿನಾರು ಜೇನು ತುಂಬಿದ ಕೊಡಗಳಿಂದ ಆಕಳಿನ ಹಾಗೂ ಕರುವಿನ ಆಕಾರವನ್ನು ರಚಿಸಬೇಕು. ಚಿನ್ನದಿಂದ ಆ ಹಸುವಿನ ಮುಖವನ್ನು , ಅಗರು ಗಂಧಗಳಿಂದ ಕೊಂಬು, ತಾಮ್ರದಿಂದ ಪೃಷ್ಠ, ಬಟ್ಟೆಯಿಂದ ಗಂಗೆದೊಗಲು, ಬಿಳಿಕಂಬಳಿ ಸುತ್ತಿದ ಕಬ್ಬಿನ ಗಳಗಳಿಂದ ಕಾಲು, ಬೆಲ್ಲದಿಂದ ಬಾಯಿ, ಸಕ್ಕರೆಯಿಂದ ನಾಲಿಗೆ, ಹೂಗಳಿಂದ ತುಟಿ, ಹಣ್ಣುಗಳಿಂದ ಹಲ್ಲು, ದರ್ಭೆಗಳಿಂದ ಕೂದಲು, ಬೆಳ್ಳಿಯಿಂದ ಗೊರಸು, ಎಲೆಗಳಿಂದ ಕಿವಿ ಮುಂತಾದವುಗಳನ್ನು ಪ್ರಮಾಣಕ್ಕೆ ತಕ್ಕಂತೆ ಮಾಡಿ ಸರ್ವಲಕ್ಷಣ ಸಂಪನ್ನವಾದ ಒಂದು ಉತ್ತಮ ಜೇನು ಧೇನುವನ್ನು ನಿರ್ಮಿಸಬೇಕು. ಆ ಜೇನು ಆಕಳಿನ ನಾಲ್ಕೂ ಕಡೆಗೂ ನಾಲ್ಕು ಎಳ್ಳಿನ ಪಾತ್ರೆಗಳನ್ನು ಇರಿಸಬೇಕು. ಕಂಚಿನ ಮೊಲೆ,

ಕಂಠಾಭರಣಗಳನ್ನು ಮಾಡಿಸಿ ಗಂಧಪುಷ್ಪಗಳಿಂದ ಪೂಜಿಸಿ ಬಡ ಬ್ರಾಹ್ಮಣನಿಗೆ-

ರಸಜ್ಞಾ ಸರ್ವದೇವಾನಾಂ ಸರ್ವಭೂತ ಹಿತೇರತಾ ।
ಪ್ರೀಯಂತಾಂ ಪಿತರೋದೇವಾ ಮಧುಧೇನೋ ನಮೋಽಸ್ತು ತೇ ॥

ಎಂಬ ಮಂತ್ರವನ್ನು ಹೇಳಿ ಆ ಗೋವಿನ ಬಾಲದ ಬುಡವನ್ನು ಮುಟ್ಟಿ ಸಂಕಲ್ಪ ಪೂರ್ವಕ ದಾನ ಮಾಡಬೇಕು. ಮತ್ತು ಮಧುವಾತಾ ಋತಾಯತೇ ಎಂಬ ಮಧುಸೂಕ್ತವನ್ನು ಹೇಳಿ ದಾನಕೊಟ್ಟಮೇಲೆ ಛತ್ರಿ, ಪಾದರಕ್ಷೆಗಳನ್ನೂ ಕೊಡಬೇಕು. ದಾನ ತೆಗೆದುಕೊಳ್ಳುವವನು ಕೂಡ

ಅಹಂ ಗೃಹ್ಣಾಮಿ ತ್ವಾಂದೇವಿ ಕುಟುಂಬಾರ್ಥೇ ವಿಶೇಷತಃ ।
ಕಾಮ ಕಾಮದುಘೇ ಕಾಮಾನ್ ಮಧುಧೇನೋ ನಮೋಽಸ್ತು ತೇ ॥

ಈ ಮಂತ್ರ ಹೇಳಿ ಸ್ವೀಕರಿಸಬೇಕು.

ಈ ಮಧುಧೇನು ದಾನವಿತ್ತವನು ಒಂದುದಿನ, ತೆಗೆದುಕೊಂಡವನು ಮೂರುದಿನ ಬರೀ ಪಾಯಸ, ಜೇನುತುಪ್ಪ (ಮಾತ್ರ) ಸ್ವೀಕರಿಸಬೇಕು. ಇದರಿಂದ ದಾನಿಯೂ ಅವನ ಪೂರ್ವಜರೂ ಸದ್ಗತಿಯನ್ನು ಹೊಂದುವರು.

( ವರಾಹ ಪುರಾಣ ಆಧಾರದಿಂದ )



# ಕಾರ್ತಿಕ ಮಾಸದಲ್ಲಿ ಗೋದಾನದ ಹಿರಿಮೆ.

ಶ್ರೀ ಬ್ರಹ್ಮದೇವರು ನಾರದರನ್ನು ಕುರಿತು ಹೇಳುತ್ತಾರೆ. ನಾರದನೇ ! ಕಾರ್ತಿಕವ್ರತಾಚರಣೆಯನ್ನು ಮಾಡಿದ ಪುರುಷನು ಉತ್ತಮವಾದ ಗೋದಾನವನ್ನು ಮಾಡಬೇಕು. ಗೋದಾನ ಮಾಡುವದರಿಂದ ಕಾರ್ತಿಕ ವ್ರತವು ನಿಶ್ಚಿತವಾಗಿ ಪೂರ್ಣವಾಗುವುದು [1].

ಈ ಭೂಲೋಕದಲ್ಲಿ ಸಂಸಾರ ಸಾಗರದಿಂದ ಪಾರಾಗಲು ಗೋದಾನಕ್ಕಿಂತ ಶ್ರೇಷ್ಠವಾದ ಇನ್ನೊಂದು ದಾನವಿಲ್ಲ ಆದ್ದರಿಂದ ಗೋದಾನವನ್ನು ಮಾಡಬೇಕು.[2]

ಹತ್ತು ಆಕಳು ಕಟ್ಟಿದವನು ಒಂದು ಆಕಳನ್ನು ದಾನಮಾಡಬೇಕು. ನೂರು ಆಕಳು ಕಟ್ಟಿದವನು ಹತ್ತು ಆಕಳುಗಳನ್ನು ದಾನವಾಗಿ ಕೊಡಬೇಕು. ಅದರಂತೆ ಒಂದು ಸಾವಿರ ಆಕಳುಗಳನ್ನು ಕಟ್ಟಿದವನು ನೂರು ಆಕಳುಗಳನ್ನು ದಾನ ಮಾಡಬೇಕು, ಮೂವರಿಗೂ ದಾನದ ಫಲವು ಸಮನಾಗಿ ದೊರಕವುದು. [3]

ಮೂರು ಲೋಕಗಳಲ್ಲಿ ಗೋದಾನಕ್ಕಿಂತಲೂ ಶ್ರೇಷ್ಠವಾದ ದಾನವೇ ಇರುವುದಿಲ್ಲ. ನ್ಯಾಯಮಾರ್ಗದಿಂದ ಸಂಪಾದಿಸಿದ ಆಕಳನ್ನು ದಾನಮಾಡಿದಾಗ ಅದು ದಾನಿಯ ಸಮಸ್ತ ಕುಲವನ್ನು ಸಂಸಾರ ಸಾಗರದಿಂದ ದಾಟಿಸುತ್ತದೆ. [4]

ಇಂಥ ಆಕಳು ಕೊಡುವ ಹಾಲು ಅಮೃತಕ್ಕೆ ಸಮಾನವಾಗಿರುವದು. ಆದ್ದರಿಂದ ನಾರದನೇ! ಯಾರು ಆಕಳದಾನ ಮಾಡುವರೋ ಆವರು ಮೋಕ್ಷವನ್ನೇ ಹೊಂದುವರು. [5]

---

1) ಬ್ರಹ್ಮೋವಾಚ :
ಕಾರ್ತಿಕ ವ್ರತನಿಷ್ಠಸ್ತು ಕುರ್ಯಾದ್ಗೋದಾನಮುತ್ತಮಂ।
ವ್ರತಂ ಸಂಪೂರ್ಣತಾಂ ಯಾತಿ ಗೋದಾನೇನ ನ ಸಂಶಯಃ
॥ ಕಾರ್ತಿಕಮಾಸಮಹಾತ್ಮ್ಯೆ.

2) ಗೋದಾನಾತ್ಪರಮಂ ದಾನಂ ಸಂಸಾರಾರ್ಣವ ತಾರಕಂ ।
ನಾಸ್ತಿ ನಾರದ ಲೋಕೇಽಸ್ಮಿನ್ ತಸ್ಮಾದ್ಗೋದಾನಮಾಚರೇತ್ ॥ ”

3) ಏಕಾಂ ಗಾಂ ದಶಗುರ್ದದ್ಯಾದ್ದಶ ದದ್ಯಾಚ್ಚ ಗೋಶತೀ ।
ಶತಂ ಸಹಸ್ರಗುರ್ದದ್ಯಾತ್ ಸಮಮೇತತ್ಫಲ ತ್ರಯಂ ॥ ”

4) ಗೋದಾನಾತ್ಪರಮಂ ದಾನಂ ನಾಸ್ತಿ ಕಿಂಚಿಜ್ಜಗತ್ರಯೇ ।
ಸಾ ಗೋರ್ನ್ಯಾಯಾರ್ಜಿತಾ ದತ್ತಾ ಕೃತ್ಸ್ನಂ ತಾರಯತೇಕುಲಂ ॥ ”

5) ಅಮೃತಂ ವೈ ತದಾ ಕ್ಷೀರಮಿತ್ಯುವಾಚ ಪ್ರಜಾಪತಿಃ ।
ತಸ್ಮಾದ್ದದಾತಿ ಯೋ ಗಾಂ ವೈ ಅಮೃತತ್ವಂ ಚ ಗಚ್ಛತಿ ॥ ”

ತನ್ನ ಕಲ್ಯಾಣವನ್ನು ಬಯಸುವ ಮನುಷ್ಯನು ಪೌರಾಣಿಕ, ವಿದ್ವಾಂಸ, ಶ್ರೋತ್ರಿಯ ಬ್ರಾಹ್ಮಣ, ಗೃಹಸ್ಥಾಶ್ರಮಿ, ಜೀವನೋಪಾಯ ವೃತ್ತಿಯಿಲ್ಲದ ಮನುಷ್ಯ ಇವರಲ್ಲಿ ಯಾರಿಗಾದರೂ ಗೋದಾನವನ್ನು ಕೊಡಬೇಕು.[6]

ಆದ್ದರಿಂದ ಕಾರ್ತಿಕ ಮಾಸದಲ್ಲಿ ಸ್ನಾನ, ದಾನ ಮೊದಲಾದವುಗಳನ್ನು ಮಾಡುತಿದ್ದರೂ, ಕಾರ್ತಿಕವ್ರತವು ಪೂರ್ತಿಯಾಗುವದಕ್ಕೆ ಗೋದಾನವನ್ನು ಅವಶ್ಯವಾಗಿ ಮಾಡಬೇಕು.[7]

ಪ್ರೇತಾಹ, ಸಪಿಂಡೀಕರಣ ದಿನ, ವ್ಯತೀಪಾತ ಮತ್ತು ಮಹಾಲಯ ಅಮಾವಾಸ್ಯೆಯ ದಿನ ಗೋದಾನವನ್ನು ಮಾಡುವವರು ಮುಕ್ತಿಯೋಗ್ಯರಾಗುತ್ತಾರೆ.[8]

ಕಾರ್ತಿಕ ಮಾಸದಲ್ಲಿ ಆಕಳುದಾನ ಮಾಡದಿದ್ದವನು ಕಾರ್ತಿಕ ವ್ರತಿಯಾಗಿದ್ದರೂ ಅವನಿಗೆ ಯಾವಫಲವೂ ಲಭಿಸುವುದಿಲ್ಲ.[9]

ಈ ಕಾರಣದಿಂದ ಕಾರ್ತಿಕ ಮಾಸದಲ್ಲಿ ಗೋದಾನವನ್ನು ತಪ್ಪದೇ ಮಾಡುವವರಾಗಿ ಶ್ರೀ ಕಾರ್ತಿಕದಾಮೋದರನ ಅನುಗ್ರಹವನ್ನು ಸಂಪಾದಿಸಬೇಕು.



---

6) ಪೌರಾಣಿಕಾಯ ವಿದುಷೇ ಶ್ರೋತ್ರಿಯಾಯ ಕುಟುಂಬಿನೇ ।
ವೃತ್ತಿಹೀನಾಯ ದೇಯಂ ಗೋದಾನಂ ಹಿತಮಿಚ್ಛತಾ ॥

7) ತಸ್ಮಾತ್ ಕಾರ್ತಿಕೇ ಮಾಸೇ ತು ಸ್ನಾನದಾನ ಪುರಸ್ಸರಂ ।
ಗೋದಾನಂ ತುಪ್ರಕರ್ತವ್ಯಂ ವ್ರತಸಂಪೂರ್ತಿ ಹೇತವೇ ॥

8) ಪ್ರೇತಾಹೇ ಚ ಸಪಿಂಡೇ ಚ ವ್ಯತೀಪಾತೇ ಮಹಾಲಯೇ ।
ಯೋದದಾತಿ ಗವಾಂ ದಾನಮಮೃತತ್ವಾಯ ಕಲ್ಪತೇ ।

9) ಗವಾಂ ದಾನಮಕುರ್ವಾಣಃ ಕಾರ್ತಿಕೇ ಮಾಸಿ ವೈದ್ವಿಜ ।
ನಫಲಂ ಜಾಯತೇ ತಸ್ಯ ಕಾರ್ತಿಕ ವ್ರತಿನೋ ದ್ವಿಜ ॥

# ಗೋ ಸಂರಕ್ಷಣೆ

ಭಾರತೀಯ ಸಂಸ್ಕೃತಿಯಲ್ಲಿ ಪೂಜ್ಯತಮವಾದ, ಮಾನವನಿಗೆ ಅತ್ಯಂತ ಉಪಕಾರಿಯಾದ ಗೋವನ್ನು ರಕ್ಷಿಸುವದು ಪ್ರತಿಯೊಬ್ಬ ಭಾರತೀಯನ ಆದ್ಯಕರ್ತವ್ಯವೇ ಆಗಿದೆ.

ಭಗವಾನ್ ಶ್ರೀಕೃಷ್ಣನು ತನ್ನ ಅವತಾರಕಾಲದಲ್ಲಿ ಗೋವುಗಳಿಗೆ ರಕ್ಷಣೆ ನೀಡಿ "ಗೋ ಬ್ರಾಹ್ಮಣ ಮುಖ್ಯಬಂಧು" ವೆನಿಸಿ, ಪ್ರತಿಯೊಬ್ಬರೂ ಗೋ ಸಂರಕ್ಷಣೆ ಮಾಡಬೇಕೆಂಬುದಾಗಿ ತೋರಿಸಿಕೊಟ್ಟಿದ್ದಾನೆ.

ರಾಷ್ಟ್ರದಲ್ಲಿ ಸಾತ್ವಿಕ ಪ್ರವೃತ್ತಿಯನ್ನು ಕಾಯ್ದುಕೊಳ್ಳಲು -ಗೋವಿನ ರಕ್ಷಣೆಗಾಗಿ, ಶ್ರೀ ಹರಿಹರರಾಜ, ಶಿವಾಜಿ ಮಹಾರಾಜ ಮೊದಲಾದ ವೀರರು ತಮ್ಮ ಇಡೀ ಆಯುಷ್ಯವನ್ನೇ ಮುಡುಪಾಗಿಟ್ಟಿದ್ದರು.

ಈಗ ನಮ್ಮ ದೇಶದಲ್ಲಿ ದಯಾದ್ರ್ರ ಅಂತಃಕರಣಿಗಳೂ, ಧರ್ಮಾಭಿಮಾನಿಗಳೂ ಆದ ಅನೇಕ ಪೀಠಾಧಿಪತಿಗಳು ಗೋ ಸಂರಕ್ಷಣಾ ಕಾರ್ಯದಲ್ಲಿ ತೊಡಗಿರುವುದು ಬಹಳ ಹೆಮ್ಮೆಯ ವಿಷಯವಾಗಿದೆ. ಇದಕ್ಕಾಗಿ ಕೆಲವು ಗೋಸಂರಕ್ಷಣಾ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ.

ಶ್ರೀ ಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಶ್ರೀಯಲಗೂರುಕ್ಷೇತ್ರದಲ್ಲಿ ಶ್ರೀ ಪ್ರಮೋದಾತ್ಮ ಗೋಸಂರಕ್ಷಣಾ ಕೇಂದ್ರವನ್ನು ಮತ್ತು ಶ್ರೀ ಮಳಖೇಡ ಕ್ಷೇತ್ರದಲ್ಲಿ ಕೂಡ ಗೋಸಂರಕ್ಷಣಾ ಕೇಂದ್ರವನ್ನು ಸ್ಥಾಪಿಸಿದ್ದಾರೆ.

ಉಡುಪಿಯ ಶ್ರೀಕೃಷ್ಣಮಠದಲ್ಲಿ ದೊಡ್ಡದಾದ ಗೋಶಾಲೆಯು ನಿರ್ಮಾಣವಾಗಿದೆ. ಅನೇಕ ಗೋವುಗಳು ರಕ್ಷಣೆ ಪಡೆಯುತ್ತಿವೆ.ಹಾಗೆಯೇ, ಶ್ರೀ ರಾಮಚಂದ್ರಾಪೂರ ಮಠದ ಶ್ರೀ ಶ್ರೀ ರಾಘವೇಶ್ವರ ಭಾರತಿ ಸ್ವಾಮಿಗಳು ಶಿವಮೊಗ್ಗ ಜಿಲ್ಲೆಯ ಹನಿಯ ಗ್ರಾಮದಲ್ಲಿ ಕಾಮದುಘಾಯೋಜನೆಯನ್ನು ರೂಪಿಸಿ ಗೋಸಂರಕ್ಷಣಾ ಕಾರ್ಯವನ್ನು ಮಾಡುತ್ತಿದ್ದಾರೆ. ನಮ್ಮ ಭಾರತದಲ್ಲಿ ಅತಿ ಪ್ರಾಚೀನತಮ ಗೋರಕ್ಷಣ ಸಂಸ್ಥೆ ಮಹಾರಾಷ್ಟ್ರದ ಅಮರಾವತಿಯಲ್ಲಿದೆ. ಈ ಅಮರಾವತಿಯ ಸದಸ್ಯಗೋಶಾಲೆಗಳು ಒಟ್ಟು 48 ಇರುತ್ತವೆ. ವಾರಣಾಸಿಯಲ್ಲಿ ಸನ್ 1888ರಲ್ಲಿ ಮದನ ಮೋಹನ ಮಾಲವೀಯರು ಒಂದು ಗೋಶಾಲೆಯನ್ನು ಸ್ಥಾಪಿಸಿದರಂತೆ.

ಉತ್ತರ ಭಾರತದಲ್ಲಿ ಅನೇಕ ಗೋಶಾಲೆಗಳುಂಟು. ಅವುಗಳ ಹೆಸರುಗಳು ಇಂತಿವೆ.

1) ಶ್ರೀ ಕೃಷ್ಣ ಗೋಶಾಲಾ ಕೈಲಾಸ ನಗರ ( ಗಜಿಯಾಬಾದ್ )
2) ಗೋಶಾಲಾ ಹರಿಧಾಮ ಆಶ್ರಮ ಬಿರೂರ ( ಕಾನಪೂರ)
3) ಗೋಶಾಲಾ-ಅವದಪ್ರಾಂತ
4) ಶ್ರೀ ಸೂರಶ್ಯಾಮ ಗೋಶಾಲಾ ಮಥುರಾ
5) ಶ್ರೀ ಗೋರಖನಾಥ ಗೋಶಾಲಾ ಗೋರಖಪೂರ.
6) ಶ್ರೀ ಗೋಶಾಲಾ ಪಿಂಜರಾಪೋಲ, ರಾಜನಾಂದಗಾಂವ
7) ಶ್ರೀ ಲಕ್ಷ್ಮೀಗೋಶಾಲಾ ಧಾರ
8) ಶ್ರೀ ಗೋಪಾಲ ಗೋಶಾಲಾ ಮಹಿದಪುರ (ಉಜ್ಜೈನ)
9) ಶ್ರೀ ಲಕ್ಷ್ಮೀ ಗೋಶಾಲಾ ಬದನಾವರ
10) ಶ್ರೀ ಮಾಧವ ಗೋಶಾಲಾ (ಉಜ್ಜೈನ)
11) ಗೋಪಾಲ ಇಫ್ತಖಾರ ಗೋಶಾಲಾ ಜಾವರಾ
12) ಸ್ವಾಮೀರಾಧಾಕೃಷ್ಣಗೋಶಾಲಾ ಸೇಂಧವಾ
13) ಶ್ರೀ ಗೋಪಾಲಗೋಶಾಲಾ ಶಿವಪುರಕಲಾ
14) ಮಧ್ಯಪ್ರದೇಶ ಗೋ ಶಾಲಾ ಸಂಘ (ಭೂಪಾಲ)
15) ಶ್ರೀ ಟಾಟಾನಗರಗೋಶಾಲಾ ಜಮಶೇದಪುರ
16) ಶ್ರೀ ಕೃಷ್ಣ ಗೋಶಾಲಾ (ರಘುಲರಾಪಾಟಿನ ಸಿಟಿ)
17) ರಾಜಸ್ಥಾನ ಗೋಸೇವಾ ಸಂಘ ದುರ್ಗಾಪುರ
18) ಶ್ರೀ ಪಂಚಾಯತ ಗೋಶಾಲಾ ಸೂರಜಗಡ
19) ಶ್ರೀ ಕಲೀಕುಂಡ ಮೇನಾಲಕ್ಷ್ಮೀ ಗೋಶಾಲಾ ಧೋಲಕಾ
20) ಶ್ರೀ ಪಾಂಜರಾಪೋಲ ಗೋಶಾಲಾ ಸಾಂಗಲಿ
21) ಶ್ರೀ ಗೋಪಾಲಕ ಗೋರಕ್ಷಣಾಸಂಸ್ಥಾ ಸೋಲಾಪೂರ
22) ಶ್ರೀ ಗೋರಕ್ಷಣ ಸಂಸ್ಥಾ ಅಮರಾವತಿ
23) ಗೋಸೇವಾ ಸಮಿತಿ ಕಾಮರೀ ನಾಗಪೂರ
24) ಶ್ರೀ ಗೋರಕ್ಷಣಾ ಸಂಸ್ಥಾ ಯವತಮಾಲ
25) ಶ್ರೀ ಪಾಂಜರಾಪೋಲ ಗೋರಕ್ಷಣ ಸಂಸ್ಥಾ (ಪನವೇಲ)
26 ) ಶ್ರೀ ಗೋಪಾಲಕೃಷ್ಣ ಗೋರಕ್ಷಣ ಸಂಸ್ಥಾ ಮಾನವತ ( ಮಹಾರಾಷ್ಟ್ರ)
27) ಗುರುನಾನಕ ಗೋಶಾಲಾ ಕಂದರ ನಗರ ಜಲಗಾಂವ.
28) ಗೋಶಾಲಾ ಸಂತೋಷ ಗಢ, ಊನಾ ( ಹಿಮಾಚಲ)

ಬೆಂಗಳೂರಿನ ಕೆಂಗೇರಿ ಉಪ ನಗರದ ಶ್ರೀರಾಯರಮಠದಲ್ಲಿ ಒಂದು ಗೋಶಾಲೆ ಇದೆ. ಇನ್ನೂ ಅನೇಕ ಪ್ರದೇಶಗಳಲ್ಲಿ ಗೋಶಾಲೆಗಳಿವೆಯೆಂದು ತಿಳಿದುಬರುತ್ತದೆ.. ಉದಾರಿಗಳಾದ ಸಜ್ಜನರು ಈ ಗೋಶಾಲೆಗಳಿಗೆ, ಗೋಸಂರಕ್ಷಣ ಕೇಂದ್ರಗಳಿಗೆ ಗೋಗ್ರಾಸ ಮೊದಲಾದವುಗಳಿಗಾಗಿ ಹಣರೂಪದಲ್ಲಿಯಾಗಲಿ, ಗ್ರಾಸರೂಪದಲ್ಲಿಯಾಗಲಿ ದಾನ ನೀಡಿ ಗವಾಂತರ್ಗತ ಶ್ರೀ ಗೋಪಾಲಕೃಷ್ಣನ ಪ್ರೀತಿಗೆ ಪಾತ್ರರಾಗಬೇಕು.



# ಗೋಸೇವೆ

ಗೋಸೇವೆ ಮಾಡುವವರು ಪ್ರಾತಃ ಕಾಲದಲ್ಲಿ ಎದ್ದು ಗೋ ಕಟ್ಟುವ ಸ್ಥಳಕ್ಕೆ ಹೋಗಿ ಗೋಮಾತೆಯ ಸ್ಪರ್ಶಮಾಡಿ ನಂತರ ಗೋವಿನ ಕೊಂಬನ್ನು ತೊಳೆದು ಆ ನೀರನ್ನು ತಲೆಯ ಮೇಲೆ ಪ್ರೋಕ್ಷಣ ಮಾಡಿಕೊಳ್ಳಬೇಕು. ಇದರಿಂದ ಸರ್ವ ತೀರ್ಥಾಭಿಷೇಕದ ಪುಣ್ಯ ಫಲ ಪ್ರಾಪ್ತವಾಗುವುದು.

ಗೋ ಕಟ್ಟುವ ಸ್ಥಳದಲ್ಲಿ ಶಗಣಿ, ಮೂತ್ರಗಳು ಕುಣಿಗಳಲ್ಲಿ ಉಳಿಯದಂತೆ ಸ್ವಚ್ಛವಾಗಿ ಇಡಬೇಕು. ತನ್ನ ಶಯ್ಯಾಗೃಹದಂತೆ, ಆ ಗೋಷ್ಠವನ್ನು ಕೂಡ ನಿರ್ಮಲವಾಗಿ ಇಡಬೇಕು. ಅಂದರೆ ಎಲ್ಲ ಕಾಲಗಳಲ್ಲಿ ಆ ಸ್ಥಾನವನ್ನು ಪರಿಶುದ್ಧವಾಗಿರುವಂತೆ ನೋಡಿಕೊಳ್ಳಬೇಕು. ಯಾವಾಗಲೂ ತನ್ನ ಜೀವದಂತೆಯೇ ಗೋವುಗಳನ್ನು ಉಪಚರಿಸಬೇಕೆಂದು ಕೆಳಗಿನ ಪ್ರಮಾಣ ವಚನಗಳಲ್ಲಿ ತಿಳಿಸಿದ್ದಾರೆ.

ಸದಾ ಗೋಮಯ ಮೂತ್ರಾಭ್ಯಾಂ ದಂಶಶ್ಚೈವ ವಿವರ್ಜಿತಂ।
ನ ಮಲಂ ವಿಕ್ಷಿಪೇದ್ಗೋಷ್ಠೇ ಸರ್ವದೇವ ನಿಕೇತನೇ ॥
ಆತ್ಮನಃ ಶಯನೀಯಸ್ಯ ಸದೃಶಂ ಕಾರಯೋದ್ಬುಧಃ ।
ಸಮಂ ನಿರ್ವಾಪಯೇದ್ಯತ್ನಾತ್ ಶೀತವಾತ ರಜಸ್ತಥಾ ॥
ಪ್ರಾಣಸ್ಯ ಸದೃಶಂ ಪಶ್ಯೇದ್ಗಾಂಚ ಸಾಮಾನ್ಯ ವಿಗ್ರಹಂ ।
ಅಸ್ಯ ದೇಹೇ ಸುಖಂ ದುಃಖಂ ತಥಾ ತಸ್ಯೈವ ಕಲ್ಪತೇ ॥

ಶ್ರೀ ಪದ್ಮ ಮಹಾಪುರಾಣ

ಗೋವುಗಳನ್ನು ಕಟ್ಟುವ ಸ್ಥಳವು ಎಲ್ಲ ದೇವತೆಗಳ ವಾಸಸ್ಥಾನವಾಗಿರುತ್ತದೆ. ಅಲ್ಲಿ ಚಳಿ, ಮಳೆ, ಬಿಸಲು, ಗಾಳಿ, ಧೂಸ ಕಡ್ಡಿಗಳು ನುಗ್ಗದಂತೆ ಚೊಕ್ಕಟವಾಗಿರಿಸಬೇಕು. ನೊಣ, ಹುಳ, ಹುಪ್ಪಡಿಗಳು ಪ್ರವೇಶಿಸದಂತೆ, ನಿರ್ಮಲವಾಗಿರಿಸಬೇಕು.

ತನ್ನ ದೇಹದಂತೆ ಪಶುಗಳ ದೇಹಕ್ಕೂ ಸುಖ ದುಃಖಗಳಾಗುತ್ತವೆ ಎಂದು ತಿಳಿದು ಆವುಗಳಿಗೂ ದುಃಖವಾಗದಂತೆ, ಹೊಟ್ಟೆಗೆ ಕಾಲಕಾಲಕ್ಕೆ ಆಹಾರ ಕೊಟ್ಟು, ನೀರು ಕುಡಿಸಬೇಕು.

ಆಗಾಗ್ಗೆ ಆವುಗಳ ಮೈತೊಳೆದು, ಕಾಡಿಗೆ ಹಚ್ಚಿ ಮೈಮೇಲೆ ಬಣ್ಣದಿಂದ ಚಿತ್ರ ತೆಗೆದು, ಹೂ ಏರಿಸಿ ಅಲಂಕರಿಸಬೇಕು. ನಿತ್ಯ ಪೂಜೆಯನ್ನು ಮಾಡಿ ಗೋಗ್ರಾಸ ಕೊಟ್ಟು ನಂತರ ತಾನು ಊಟ ಮಾಡಬೇಕು.

ಗೋಸೇವೆಯೊಂದು ಪರಮ ಪವಿತ್ರ ಕಾರ್ಯವೆಂದು ತಿಳಿದು ನಿತ್ಯ ಸೇವೆ ಮಾಡಿದಲ್ಲಿ ಶ್ರೀ ಗೋಪಾಲಕೃಷ್ಣನು ಪ್ರೀತನಾಗುತ್ತಾನೆ.

ಗಾವೋ ಬಂಧುಃ ಮನುಷ್ಯಾಣಾಂ ಮನುಷ್ಯಃ ಬಾಂಧವಾ ಗವಾಂ ।
ಗೌಸ್ತು ಯಸ್ಮಿನ್‌ಗೃಹೇ ನಾಸ್ತಿ ತದ್ಬಂಧುರಹಿತಂ ಗೃಹಂ ॥

ಮನುಷ್ಯನಿಗೆ ಗೋವುಗಳು ಬಂಧು, ಗೋವುಗಳಿಗೆ ಮನುಷ್ಯನು ಬಂಧು, ಗೋ ಇಲ್ಲದ ಮನೆ ಬಾಂಧವರಿಲ್ಲದ ಮನೆ ಇದ್ದಂತೆ, ಎಂದು ತಿಳಿಯಬೇಕು.

ಪ್ರತಿ ನಿತ್ಯವೂ ಗೋಮಾತೆಯ ಸ್ಪರ್ಶಮಾಡಿದರೆ ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯ ಬರುವುದು. ಸರ್ವ ಪಾಪಗಳು ಪರಿಹಾರವಾಗುವುವು. ಗೋವಿನ ಪಾದಧೂಳಿಯನ್ನು ತಲೆಯ ಮೇಲೆ ಧರಿಸಿದರೆ ಮಂದಾಕಿನೀ ಮೊದಲಾದ ಪುಣ್ಯ ತೀರ್ಥಗಳಲ್ಲಿ ಮಿಂದಷ್ಟು ಪುಣ್ಯ ಬರುತ್ತದೆ.

ಪ್ರಾತಃ ಕಾಲದಲ್ಲಿ ಕಪಿಲಗೋವಿನ ಪ್ರದಕ್ಷಿಣೆ ಮಾಡಿದರೆ ಭೂ ಪ್ರದಕ್ಷಿಣೆ ಮಾಡಿದ ಪುಣ್ಯವು ಬರುತ್ತದೆ. ಕಪಿಲ ಗೋವಿನ ಮೈ ತುರಿಸಿದರೆ ನೂರು ಗೋದಾನದ ಫಲ ಬರುತ್ತದೆ. ಅದಕ್ಕೆ ಹುಲ್ಲು, ನೀರು ಕೊಟ್ಟರೆ ಗೋಮೇಧಯಜ್ಞದ ಫಲ ಬರುತ್ತದೆ.

ಹೀಗೆ ನಿತ್ಯದಲ್ಲಿ ಗೋಸೇವೆಯನ್ನು ಮಾಡಿ ಗವಾಂತರ್ಯಾಮಿ ಶ್ರೀ ಗೋಪಾಲಕೃಷ್ಣನ ಪ್ರೀತಿಗೆ ಪಾತ್ರರಾಗಬೇಕು.



# ಗೋಲೋಕ

ಗೋಲೋಕವು ಕಾಲಾತೀತವಾದ ಲೋಕವಾಗಿದೆ. ಆದುದರಿಂದ ಅಲ್ಲಿರುವವರಿಗೆ ವೃದ್ಧಾಪ್ಯವೇ ಬರುವುದಿಲ್ಲ, ಅಲ್ಲಿ ಅಗ್ನಿಯೂ ಇಲ್ಲ, ಅಲ್ಲಿ ಯಾರಿಗೂ ಯಾವ ವಿಧವಾದ ಅಶುಭವು ಸ್ವಲ್ಪವಾದರೂ ಉಂಟಾಗುವುದಿಲ್ಲರೋಗಗಳ ಬಾಧೆ ಇರುವುದಿಲ್ಲ, ಆಯಾಸವೂ ಇರುವುದಿಲ್ಲ, ಅಲ್ಲಿರುವ ಗೋವುಗಳಿಗೆ ಮನಸ್ಸಿನಲ್ಲಿ ಬಯಸಿದ ವಸ್ತುಗಳೆಲ್ಲವೂ ಕೂಡಲೇ ಲಭಿಸುತ್ತವೆ. ಅಲ್ಲಿ ಗೋವುಗಳು ಸ್ವೇಚ್ಛೆಯಿಂದ ಸಂಚರಿಸಲು ಇಚ್ಛಿಪಡುತ್ತವೆ. ಸಂಕಲ್ಪ ಮಾತ್ರದಿಂದ ಸಕಲ ವಿಧಕಾಮನೆಗಳನ್ನು ಪಡೆದುಕೊಂಡು ಉಪಭೋಗಿಸುತ್ತವೆ [1].

ಆ ಗೋಲೋಕದಲ್ಲಿ ವೃಕ್ಷಗಳು ಸುಮಧರವಾಗಿ ಫಲಗಳನ್ನು ಬಿಡುತ್ತವೆ. ದಿವ್ಯವಾದ ಪುಷ್ಪಗಳಿಂದಲೂ ಸಂಪನ್ನವಾಗಿರುತ್ತವೆ. ಪುಷ್ಪಗಳು ರಮಣಿಯವಾಗಿಯೂ, ಸುಗಂಧಯುಕ್ತವಾಗಿಯೂ ಇರುತ್ತವೆ [2].

ಆ ಗೋಲೋಕದಲ್ಲಿ ಭೂಮಿಯು ಮಣಿಮಯವಾಗಿದೆ. ಮತ್ತು ಸ್ವರ್ಣಮಯವಾದ ಮಳಲಿನಿಂದ ಯುಕ್ತವಾಗಿದೆ. ಅದರ ಸ್ಪರ್ಶವು ಎಲ್ಲ ಋತುಗಳಲ್ಲಿಯೂ ಸುಖದಾಯಕವಾಗಿರುತ್ತದೆ. ಗೋಲೋಕದಲ್ಲಿರುವ ಭೂಮಿಯು ಕೆಸರಾಗಲಿ, ಧೂಳಾಗಲೀ ಇರುವುದಿಲ್ಲ. ಭೂಮಿಯ ಸರ್ವದಾ ಶುಭದಾಯಕವಾಗಿರುತ್ತದೆ [3]

---

1) ನ ತತ್ರಕ್ರಮತೇಕಾಲೋ ನಜರಾ ನಚ ಪಾವಕಃ ।
ತಥಾ ನಾಸ್ಯಶುಭಂ ಕಿಂಚಿನ್ನ ವ್ಯಾಧಿಸ್ತತ್ರ ನಕ್ಲಮಃ ॥
ಶ್ರೀ ಮನ್ ಮಹಾಭಾರತ

ಯದ್ಯಚ್ಛಗಾವೋ ಮನಸಾ ತಸ್ಮಿನ್ ವಾಂಛಂತಿ ವಾಸವ ।
ತತ್ಸರ್ವಂ ಪ್ರಾಪ್ನುವಂತಿ ಸ್ಮ ಮಮ ಪ್ರತ್ಯಕ್ಷದರ್ಶನಾತ್ ।
ಕಾಮಗಾಃ ಕಾಮಚಾರಿಣ್ಯಃ ಕಾಮಾತ್ ಕಾಮಾಂಶ್ಚ ಭುಂಜತೇ ॥
ಶ್ರೀ ಮನ್ ಮಹಾಭಾರತ

2) ಯತ್ರವೃಕ್ಷಾ ಮಧುಫಲಾ ದಿವ್ಯ ಪುಷ್ಪ ಫಲೋಪಗಾಃ।
ಪುಷ್ಪಾಣಿ ಚ ಸುಗಂಧೀನಿ ದಿವ್ಯಾನಿ ದ್ವಿಜಸತ್ತಮ ॥
ಶ್ರೀ ಮನ್ ಮಹಾಭಾರತ

3) ಸರ್ವಾ ಮಣಿಮಯಿ ಭೂಮಿಃ ಸರ್ವ ಕಾಂಚನವಾಲುಕಾ ।
ಸರ್ವರ್ತುಸುಖ ಸಂಸ್ಪರ್ಶಾ ನಿಷ್ಪಂಕಾ ನೀರಜಾ : ಶುಭಾ ॥
ಶ್ರೀ ಮನ್ ಮಹಾಭಾರತ

ಬಹು ಅಮೌಲ್ಯವಾದ ಮಣಿಗಳನ್ನೇ ದಳಗಳನ್ನಾಗಿ ಹೊಂದಿರುವ, ಸುವರ್ಣದ ಪ್ರಭೆಯಿಂದ ಕೂಡಿರುವ ಕೇಸರಗಳುಳ್ಳ, ನೀಲಕಮಲಗಳೊಡನೆ ಬೆರೆತುಕೊಂಡಿರುವ ಕೆಂದಾವರೆಗಳಿಂದ ಯುಕ್ತವಾದ ಸರೋವರಗಳಿಂದ ಗೋಲೋಕದ ಭೂಮಿಯು ಸಮಲಂಕೃತವಾಗಿದೆ [4]

ಆ ಸರೋವರಗಳು ಸಾವಿರಾರು ಸುಳಿಗಳಿಂದ ಕೂಡಿದ, ವಿಕಸಿತವಾದ ಗನ್ನೇರಳೆ ವೃಕ್ಷಗಳ ಉಪವನಗಳಿಂದಲೂ, ವಿಕಸಿತವಾದ ವೃಕ್ಷಗಳಿಂದ ಕೂಡಿದ ಸಂತಾನಕವೆಂಬ ಕಲ್ಪವೃಕ್ಷಗಳ ವನಗಳಿಂದಲೂ ಸಮಲಂಕೃತವಾಗಿವೆ. [5]

ಗೋಲೋಕದಲ್ಲಿ ಸುವರ್ಣಮಯವಾದ ಗಿರಿಗಳು, ಮಣಿರತ್ನಗಳ ಶೈಲಸಮೂಹಗಳು ಇವೆ. ಅವು ಸರ್ವರತ್ನಮಯವಾದ, ಎತ್ತರವಾದ ಸುಮನೋಹರವಾದ ಶಿಖರಗಳಿಂದ ಪ್ರಕಾಶಿಸುತ್ತವೆ. [6]

ಗೋಲೋಕದಲ್ಲಿ ಪುಣ್ಯ ಕರ್ಮವನ್ನು ಮಾಡಿದ ಯಶೋವಂತರಾದ ಜನರು ರಮಣೀಯವಾದ ಮತ್ತು ವಿಚಿತ್ರವಾದ ವಿಮಾನಗಳಲ್ಲಿ ವಿಹರಿಸುತ್ತಾ ಆನಂದ ಪಡುತ್ತಾರೆ. [7]

ಕಾಯಕ್ಲೇಶಗಳನ್ನು ಸಹಿಸುವ, ಸಹನಶೀಲರಾದ, ದಯಾಳುಗಳಾದ, ಗುರುಜನರ ಆಜ್ಞೆಯಂತೆ ವರ್ತಿಸುವ, ಅಹಂಕಾರ, ಮಮಕಾರಗಳಿಂದ ವಿಹೀನರಾದ ಮಾನವ ಶ್ರೇಷ್ಠರು ಗೋಲೋಕಗಳಿಗೆ ಹೋಗುತ್ತಾರೆ [8].

ಯಾವನು ಯಾವುದೇ ಮಾಂಸವನ್ನು ತಿನ್ನುವದಿಲ್ಲವೋ, ಸದಾ ಭಗವಚ್ಚಿಂತನೆಯಲ್ಲಿ ನಿರತನಾಗಿರುವನೋ, ಧರ್ಮಪರಾಯಣನಾಗಿರುವನೋ, ಮಾತಾಪಿತೃಗಳ ಪೂಜೆ ಮಾಡುವನೋ, ಸತ್ಯನಿಷ್ಠನೋ, ಬ್ರಾಹ್ಮಣರ ಶುಶ್ರೂಷೆಮಾಡುವನೋ, ಅನಿಂದ್ಯನೋ, ಗೋಬ್ರಾಹ್ಮಣರ ವಿಷಯದಲ್ಲಿ

---

4) ಮಹಾರ್ಹಮಣಿ ಪತ್ರೈಶ್ಚ ಕಾಂಚನ ಪ್ರಭ ಕೇಸರೈಃ ।
ನೀಲೋತ್ಪಲ ವಿಮಿಶ್ರೈಶ್ಚ ಸರೋಭಿರ್ಬಹು ಪಂಕಜೈಃ ॥

5) ಕರವೀರ ವನೈಃ ಫುಲ್ಲೈಃ ಸಹಸ್ರಾವರ್ತ ಸಂವೃತೈಃ ।
ಸಂತಾನಕವನೈಃ ಫುಲ್ಲೈರ್ವೃಕ್ಷೈಶ್ಚ ಸಮಲಂಕೃತಾಃ ॥

6) ಸೌವರ್ಣಾ ಗಿರಯಸ್ತತ್ರ ಮಣಿರತ್ನ ಶಿಲೋಚ್ಚಯಾಃ ।
ಸರ್ವರತ್ನ ಮಯೈರ್ಭಾಂತಿ ಶೃಂಗೈಶ್ಚಾರುಭಿರುಚ್ಛ್ರಿತೈಃ ॥

7) ವಿಮಾನೇಷು ವಿಚಿತ್ರೇಷು ರಮಣೀಯೇಷು ಭಾರತ ।
ಮೋದಂತೇ ಪುಣ್ಯ ಕರ್ಮಾಣೋ ವಿಹರಂತೋ ಯಶಸ್ವಿನಃ ॥

ಶ್ರೀ ಮನ್ ಮಹಾಭಾರತ

8) ತತ್ರ ಸರ್ವಸಹಾಃ ಕ್ಷಾಂತಾವತ್ಸಲಾ ಗುರುವರ್ತಿನಃ ।
ಅಹಂಕಾರೈರ್ವಿರಹಿತಾ ಯಾಂತಿ ಶಕ್ರಸರೋತ್ತಮಾಃ ॥

ಶ್ರೀ ಮನ್ ಮಹಾಭಾರತ

ಕೋಪಗೊಳ್ಳುವುದಿಲ್ಲವೋ, ಧರ್ಮದಲ್ಲಿ ಅನುರಕ್ತನಾಗಿರುವನೋ, ಗುರುಜನರ ಶುಶ್ರೂಷೆ ಮಾಡುವನೋ, ಜೀವನ ಪರ್ಯಂತವಾಗಿ ಸತ್ಯವ್ರತಕ್ಕೆಗೊಂಡಿರುವನೋ ದಾನ ಶೀಲನೋ, ಅಪರಾಧ ಮಾಡಿದವರನ್ನು ಕ್ಷಮಿಸುವನೋ, ಮೃದು ಸ್ವಭಾವದವನೋ, ಜಿತೇಂದ್ರಿಯನೋ, ದೇವಾರಾಧಕನೋ, ಅತಿಥಿಗಳನ್ನು ಸತ್ಕರಿಸುವನೋ; ದಯಾವಂತನೋ, ಅಂತಹ ಸದ್ಗುಣ ಪರಿಪೂರ್ಣನಾದ ಮಾನವನು ಮಾತ್ರವೇ ಶಾಶ್ವತವಾದ ಅವ್ಯಯವಾದ ಗೋಲೋಕಕ್ಕೆ ಹೋಗುತ್ತಾನೆ[9]

ಉತ್ತಮವಾದ ವ್ರತವನ್ನು ಅನುಷ್ಠಾನ ಮಾಡುವ ಋಷಿಗಳೂ, ಸಾತ್ವಿಕ ಬುದ್ಧಿಯುಳ್ಳ ಬ್ರಾಹ್ಮಣರೂ- ತಾವು ಮಾಡುವ ಶುಭಕರ್ಮಗಳಿಂದ ಸಶರೀರರಾಗಿಯೇ ಆ ಗೋಲೋಕಗಳಿಗೆ ಹೋಗಬಲ್ಲರು.

ಉತ್ತಮವಾದ ವ್ರತವನ್ನು ಅನುಷ್ಠಾನ ಮಾಡುವ ಯೋಗಿಗಳು ಶರೀರವನ್ನು ಬಿಟ್ಟು ಮೋಕ್ಷವನ್ನು ಪಡೆಯುವ ಸಮಯದಲ್ಲಿ ನಿರ್ಮಲವಾದ ಮನಸ್ಸಿನಿಂದ ಸ್ವಪ್ನಪ್ರಾಯವಾದ ಆ ಲೋಕಗಳನ್ನು ಇಲ್ಲಿಂದಲೇ ಕಾಣುತ್ತಾರೆ.

ಶಕ್ತಿಶಾಲಿಯಾದ ಸೂರ್ಯನೂ, ಬಲಶಾಲಿಯಾದ ವಾಯುವೂ ಯಾವ ಲೋಕಗಳಿಗೆ ಅಧಿಪತಿಗಳಾಗಿರುವರೋ, ಯಾವ ಲೋಕಗಳಲ್ಲಿರುವ ಐಶ್ವರ್ಯಗಳಿಗೆ ವರುಣನು ಅಧಿಪತಿಯಾಗಿರುವನೋ, ಅಂತಹ ಲೋಕಗಳಿಗೆ ಗೋದಾನ ಮಾಡಿರುವವರು ಹೋಗುತ್ತಾರೆ. ಗೋವುಗಳಲ್ಲಿ ಯುಗಂಧರಾ, ಸುರೂಪಾ, ಬಹುರೂಪಾ, ವಿಶ್ವರೂಪಾ ಎಂಬ ಗೋವುಗಳು ಸಕಲ ಪ್ರಾಣಿಗಳಿಗೂ ಮಾತೃಪ್ರಾಯವಾಗಿವೆ. ಮನುಷ್ಯನು ನಿಯಮಪೂರ್ವಕವಾಗಿ ಪ್ರಜಾಪತಿ ಹೇಳಿರುವ ಮಾತೃಸ್ವರೂಪಿಣಿಯರಾದ ಈ ಗೋವುಗಳ ಹೆಸರನ್ನು ಜಪಿಸಬೇಕು.[10]

---

9) ಯಃ ಸರ್ವಮಾಂಸಾನಿ ನಭಕ್ಷಯೀತ ಪುಮಾನ್
ಸದಾ ಭಾವಿತೋ ಧರ್ಮಯುಕ್ತಃ ।
ಮಾತಾಪಿತ್ರೋರರ್ಚಿತಾ ಸತ್ಯಯುಕ್ತಃ ಶುಶ್ರೂಷಿತಾಬ್ರಾಹ್ಮಣಾನಾಮನಿಂದ್ಯಃ ॥
ಅಕ್ರೋಧನೋ ಗೋಷು ತಥಾ ದ್ವಿಜೇಷು ಧರ್ಮೇರತೋ ಗುರು
ಶುಶ್ರೂಷಕಶ್ಚ ।
ಯಾವಜ್ಜೀವಂ ಸತ್ಯವೃತ್ತೇರತಶ್ಚ ದಾನೇ ರತೋ ಯಃ ಕ್ಷಮೀ ಚಾಪರಾಧೇ ॥
ಮೃದುದಾಂತೋ ದೇವ ಪರಾಯಣಶ್ಚ ಸರ್ವಾತಿಥಿಶ್ಚಾಪಿ ತಥಾ ದಯಾವಾನ್।
ಈದೃಗ್ಗುಣೋ ಮಾನವಸ್ತಂ ಪ್ರಯಾತಿ ಲೋಕಂ ಗವಾಂ ಶಾಶ್ವತಂ
ಚಾವ್ಯಯಂಚ ॥

ಶ್ರೀ ಮನ್ ಮಹಾಭಾರತ

10) ಯೇಷಾಮಧಿಪತಿಃ ಪೂಷಾ ಮಾರುತೋ ಬಲವಾನ್ ಬಲೀ ।
ಐಶ್ವರ್ಯೇ ವರುಣೋ ರಾಜಾ ನಾಸುಮಾತ್ರಂ ಯುಗಂಧರಾಃ ।
ಸುರೂಪಾ ಬಹುರೂಪಾಶ್ಚ ವಿಶ್ವರೂಪಾಶ್ಚ ಮಾತರಃ ।
ಪ್ರಾಜಾಪತ್ಯಮಿತಿ ಬ್ರಹ್ಮನ್ ಜಪೇನ್ನಿತ್ಯಂ ಯತವ್ರತಃ ॥

ಶ್ರೀ ಮನ್ ಮಹಾಭಾರತ

ಯಾವನು ಗೋವುಗಳ ಶುಶ್ರೂಷೆಯನ್ನು ಮಾಡುವನೋ, ಯಾವಾಗಲೂ ಆವುಗಳ ಜೊತೆಯಲ್ಲಿಯೇ ಇರುವನೋ, ಅಂತಹವನ ವಿಷಯದಲ್ಲಿ ತೃಪ್ತಿಯನ್ನು ಹೊಂದುವ ಗೋವುಗಳು ಅವನಿಗೆ ಅತ್ಯಂತ ದುರ್ಲಭವಾದ ವರಗಳನ್ನು ದಯಪಾಲಿಸುತ್ತವೆ. [11]



11) ಗಾಶ್ಚ ಶುಶ್ರೂಷತೇ ಯಶ್ಚ ಸಮನ್ವೇತಿ ಚ ಸರ್ವಶಃ ।
ತಸ್ಮೈ ತುಷ್ಟಾಃ ಪ್ರಯಚ್ಛಂತಿ ವರಾನಪಿ ಸುದುರ್ಲಭಾನ್ ॥

ಶ್ರೀ ಮನ್ ಮಹಾಭಾರತ

# ಗೋವ್ರತ

ಶ್ರೀವೇದವ್ಯಾಸರು ಧರ್ಮರಾಜನನ್ನು ಕುರಿತು ಅಶ್ವಮೇಧಯಾಗಗಳಿಂದ ಶ್ರೀಹರಿಯನ್ನು ಆರಾಧಿಸು ಎಂದು ಹೇಳಿದಾಗ, ಧರ್ಮರಾಜನು ಅದರಂತೆ ಮಾಡಿಭೋಗಗಳನ್ನು ಪೂರ್ತಿಯಾಗಿ ತೊರೆದು ಗೋವ್ರತ ಮೊದಲಾದ ವ್ರತಗಳಿಂದ ಯುಕ್ತನಾಗಿ ಭೂಮಿಯನ್ನು ಆಳಿದನು ಎಂಬುದಾಗಿ ಶ್ರೀ ಮನ್ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀಮದಾಚಾರ್ಯರು ತಿಳಿಸಿರುವರು. [1]

ಇಲ್ಲಿ ಗೋವ್ರತ ವೆಂದರೆ ಯಾವುದು ? ಎಂಬುದಕ್ಕೆ ಗ್ರಂಥಕಾರರು, ಟಿಪ್ಪಣಿಕಾರರು ಹೇಳಿರುವುದನ್ನು ಸಂಗ್ರಹಿಸಲಾಗಿದೆ.

ಪಶುಗಳಂತೆ ಎಲ್ಲೆಂದರಲ್ಲಿ ಮಲಗುವುದು, ಯಾರೊಡನೆಯಾದರೂ ಕುಳ್ಳಿರುವುದು, ಏನಾದರೂ ಹೊದ್ದುಕೊಳ್ಳುವದು, ಇಂಥ ವೈರಾಗ್ಯದ ಜೀವನವೇ ಗೋವ್ರತ ಎಂಬುದಾಗಿ ಶ್ರೀಮನ್ ಮಹಾಭಾರತದಲ್ಲಿ ಹೇಳಿದೆ.

ಗೋಮೂತ್ರದಿಂದ ಸ್ನಾನ, ಗೋವಿನ ಹಾಲು, ಮೊಸರು ಮುಂತಾದವನ್ನೇ ಸೇವಿಸಿ ಬದುಕುವದು, ಹಸು ಎದ್ದಾಗ ಏಳುವುದು, ಕುಳಿತಾಗ ಕುಳ್ಳಿರುವದು, ತನ್ನ ವೈಯಕ್ತಿಕ ರಕ್ಷಣೆಯ ಪರಿವೆ ಇಲ್ಲದೇ ಗೋವನ್ನು ರಕ್ಷಿಸುವದು ಗೋವ್ರತವೆಂದು ಶ್ರೀ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಹೇಳಿದೆ.

ಗೋವಿಗೆ ಧಾನ್ಯವನ್ನು ತಿನಿಸಿ ಗೋಮಯದಲ್ಲಿ ಬರುವ ಆ ಧಾನ್ಯಗಳಿಂದ ಜೀವಿಸುವದು ಗೋವ್ರತ ವೆಂದು ಶ್ರೀ ಜನಾರ್ದನೀಯ ಟಿಪ್ಪಣಿಯಲ್ಲಿ ಹೇಳಿದೆ.

ಗೋಕ್ಷೀರವನ್ನೇ ಸೇವಿಸಿ ಬದುಕುವದು ಗೋವ್ರತ ವೆಂದು ಶ್ರೀ ವರದರಾಜೀಯ ಟಿಪ್ಪಣಿಯಲ್ಲಿ ಹೇಳಿದೆ.

ಗೋಮೂತ್ರದಲ್ಲಿ ಧಾನ್ಯವನ್ನು ಹಾಕಿಟ್ಟು ಸೇವಿಸುವದು ಗೋವ್ರತ ವೆಂದು ಪ್ರಮಾಣ ಸಂಗ್ರಹದಲ್ಲಿಯೂ, ಶ್ರೀ ವಾದಿರಾಜೀಯ ಟಿಪ್ಪಣಿಯಲ್ಲಿಯೂ ಹೇಳಿದೆ.



1) ಇತ್ಯುಕ್ತ : ಸ ತಥಾಚಕ್ರೇ ತ್ಯಕ್ತ್ವಾ ಭೋಗಾಂಶ್ಚ ಕೃತ್ಸ್ನಶಃ ।
ಗೋವ್ರತಾದಿ ವ್ರತೈರ್ಯುಕ್ತ ಃ ಪಾಲಯಾಮಾಸ ಮೇದಿನೀಮ್ ॥ ( 30-4)

# ಗೋಪದ್ಮ ವ್ರತ

ಆಷಾಢ ಶುಕ್ಲಪಕ್ಷ ಏಕಾದಶಿಯಿಂದ ಪ್ರಾರಂಭಿಸಿ ಕಾರ್ತಿಕ ಶುಕ್ಲದ್ವಾದಶಿಯವರೆಗೂ ( ಅಂದರೆ ಚಾತುರ್ಮಾಸ ಕಾಲದಲ್ಲಿ ) ಈ ಗೋಪದ್ಮ ವ್ರತವನ್ನು ಆಚರಿಸಬೇಕು.

ಗೋವುಗಳಿರುವ ಕೊಟ್ಟಿಗೆಯಲ್ಲಾಗಲೀ, ಗೋವುಗಳಿರುವ ಸ್ಥಾನದಲ್ಲಿಯಾಗಲೀ, ಗೋಮಯದಿಂದ ಶುದ್ಧಮಾಡಿದ ಸ್ಥಳದಲ್ಲಿ 33 ಚಿಕ್ಕ ಚಿಕ್ಕ ಪದ್ಮಗಳನ್ನು ಬರೆಯಬೇಕು. ಅಷ್ಟೇ ಸಂಖ್ಯೆಯಲ್ಲಿ ಅರ್ಘ್ಯಗಳನ್ನು, ನಮಸ್ಕಾರ, ಪ್ರದಕ್ಷಿಣೆಗಳನ್ನು ( 33 ಸಂಖ್ಯೆಯಲ್ಲಿ) ಹಾಕಬೇಕು. 33 ಅಪೂಪಗಳನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. [1]

ಈ ಗೋಪದ್ಮವ್ರತವನ್ನು ಐದು ವರ್ಷಗಳ ಕಾಲ ಆಚರಿಸಿ ಉದ್ಯಾಪನೆಯನ್ನು ಮಾಡಬೇಕು. ಪ್ರಥಮ ಹಾಗೂ ದ್ವಿತೀಯ ವರ್ಷಗಳಲ್ಲಿ ಪಾಯಸವನ್ನು , ತೃತೀಯವರ್ಷದಲ್ಲಿ ಮಂಡಿಗೆಗಳನ್ನು, ಚತುರ್ಥ ವರ್ಷದಲ್ಲಿ ಬೆಲ್ಲವನ್ನು ಸೇರಿಸಿದ ಮಂಡಿಗೆಗಳನ್ನು, ಪಂಚಮ ವರ್ಷದಲ್ಲಿ ತುಪ್ಪದಿಂದ ತಯಾರಾದ ಭಕ್ಷ್ಯಗಳನ್ನು ನಿವೇದಿಸಬೇಕು.

ಈ ಐದು ವರ್ಷಗಳ ಗೋಪದ್ಮವ್ರತದಲ್ಲಿ ಆದಿ, ಮಧ್ಯ, ಅಂತ್ಯಗಳಲ್ಲಿ ಉದ್ಯಾಪನೆಯನ್ನು ಮಾಡಬೇಕು [2].

ಉದ್ಯಾಪನ ಮಾಡುವಾಗ ಪುರುಷಸೂಕ್ತದಿಂದ ಪುನಃ ಪುನಃ ಆಜ್ಯದಿಂದ ಹೋಮ ವಾಸುದೇವ ದ್ವಾದಶಾಕ್ಷರಗಳಿಂದ ನೂರೆಂಟು ಬಾರಿ ಅಶ್ವತ್ಥದ ಸಮಿತ್ತು, ಪಾಯಸ, ಘೃತ ಇವುಗಳಿಂದ ಹೋಮ ಮಾಡಬೇಕು [3]. ಕೊನೆಯಲ್ಲಿ ಪೂರ್ಣಾಹುತಿ ಆಚರಿಸಬೇಕು.

ಸಾಂಗವಾಗಿ ಮಾಡಿದ ಈ ಗೋಪದ್ಮವ್ರತವನ್ನು ಕೊನೆಯಲ್ಲಿ ಆ ಭಗವಂತನಿಗೆ ಅರ್ಪಿಸಿ ಮುಗಿಸಬೇಕು.



---

1) ತ್ರಯಸ್ತ್ರಿಂಶತ್ತು ಪದ್ಮಾನಿ ಗಂಧಪುಷ್ಪೈಃ ಪ್ರಪೂಜಯೇತ್ ।
ತತ್ಸಂಖ್ಯಾಕಾನಿ ಚಾರ್ಘ್ಯಾಣಿ ನಮಸ್ಕಾರ ಪ್ರದಕ್ಷಿಣಾಃ ।
ತತ್ಸಂಖ್ಯಾಕಾನಿ ಹ್ಯಪೂಪಾನಿ ಬ್ರಾಹ್ಮಣಾಯ ನಿವೇದಯೇತ್ ॥

2) ಉದ್ಯಾಪನಂ ಪ್ರಕುರ್ವೀತ ಆದೌ ಚಾಂತೇ ಚ ಮಧ್ಯಮೇ ॥

3) ಜುಹುಯಾದ್ ಪುರುಷಸೂಕ್ತೇನ ಸ್ವಾಹಾಕಾರೈಃ ಪುನಃ ಪುನಃ ।
ಪುನ ರ್ದ್ವಾದಶ ನಾಮ್ನಾಪಿ ಪಿಪ್ಪಲಸ್ಯ ಸಮಿತ್ ಶತಂ ॥
ಪಾಯಸೇನ ಶತಂ ಚೌಷ್ಟ್ಯಾಕೃತ್ವಾ ಪೂರ್ಣಾಹುತಿಂ ತಥಾ ॥

# ಗೋಷ್ಪದ ತೃತೀಯಾ ವ್ರತ

ಪ್ರತಿವರುಷ ಭಾದ್ರಪದ ಶುಕ್ಲಪಕ್ಷ ತೃತೀಯಾ, ಚೌತಿ ದಿನದಂದು ಸಕಲ ಸಜ್ಜನರು ಗೋಷ್ಪದ ತೃತಿಯಾ ವ್ರತವನ್ನು ಆಚರಿಸಬೇಕು.

ಸ್ತ್ರೀ ಅಥವಾ ಪುರುಷನು ಮೊದಲು ಮಂಗಳಸ್ನಾನವನ್ನು ಮಾಡಿ ಅಲಂಕರಿಸಿಕೊಂಡು ಅಕ್ಷತೆ, ಪುಷ್ಪ, ಮಾಲೆ, ಧೂಪ, ಚಂದನ, ಹಿಟ್ಟಿನ ಭಕ್ಷ್ಯ ಮುಂತಾದವುಗಳನ್ನು ತಯಾರಿಸಿ, ಇವುಗಳಿಂದ ಗೋವನ್ನು ಪೂಜಿಸಬೇಕು. ಅದರ ಕೊಂಬು ಮುಂತಾದ ಅಂಗಾಂಗಗಳನ್ನು ಅಲಂಕರಿಸಿ ಒಳ್ಳೆಯ ಆಹಾರವನ್ನು ಕೊಟ್ಟು ತೃಪ್ತಿಪಡಿಸಬೇಕು. ತಾವೂ ತೈಲ ಮತ್ತು ಕ್ಷಾರವಲ್ಲದ, ಅಗ್ನಿ ಪಕ್ವವಲ್ಲದ ಆಹಾರವನ್ನು ಸ್ವೀಕರಿಸಿ, ಮೇವಿಗಾಗಿ ಕಾಡಿಗೆ ಹೋಗುವಾಗ ಮತ್ತು ಕಾಡಿನಿಂದ ಹಿಂತಿರುಗಿ ಬಂದಮೇಲೆ ಗೋವಿಗೆ ಗೋಗ್ರಾಸವನ್ನು ಕೊಟ್ಟು ಕೆಳಗಿನ ಮಂತ್ರ ಹೇಳುತ್ತ ಅರ್ಘ್ಯವನ್ನು ಕೊಡಬೇಕು.

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮಮೃತಸ್ಯನಾಭಿಃ।
ಪ್ರನುವೋಚಂ ಚಿಕಿತುಷೇ ಜನಾಯ ಮಾಗಾಮನಾಗಾಮದಿತಿಂ ವಧಿಷ್ಟ ॥

**(8/101/18)**

ರುದ್ರರ ತಾಯಿ , ವಸುಗಳ ಮಗಳು, ಆದಿತ್ಯರ ತಂಗಿ, ಅಮೃತಕ್ಕೆ ಆಶ್ರಯಳು, ಇಂತಹವಳನ್ನು ಜ್ಞಾನಿ ಜನರಿಗೆ ನಾನು ತಿಳಿದೆನು. ಅಪರಾಧರಹಿತಳಾದ ಗೋವನ್ನು ಅದಿತಿಯನ್ನು ಯಾರೂ ಹಿಂಸಿಸಬೇಡಿರಿ, ಕೊಲ್ಲಬೇಡಿರಿ.

ಗಾವೋ ಮೇ ಅಗ್ರತಃ ಸಂತು ಗಾವೋಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥
( ಭವಿಷ್ಯಪುರಾಣ ಉತ್ತರ ಪರ್ವ) **(19-7)**

ಗೋವುಗಳು ನನ್ನ ಮುಂದೆ, ಹಿಂದೆ, ಹೃದಯದಲ್ಲಿರಲಿ, ನಾನು ಗೋವುಗಳ ಮಧ್ಯದಲ್ಲಿ ವಾಸಿಸುತ್ತೇನೆ.

ಪಂಚಮಿಯ ದಿನ ಸಿಟ್ಟು ಮಾಡದೇ ಶಾಂತನಾಗಿ ಗೋವಿನ ಹಾಲು ಮೊಸರು, ಆಕ್ಕಿಯ ಕಜ್ಜಾಯ, ಹಣ್ಣು, ಮತ್ತು ತರಕಾರಿಯ ಊಟ ಮಾಡಬೇಕು. ರಾತ್ರಿಯಲ್ಲಿ ನಿಯಮದಿಂದ ಇರಬೇಕು. ಬೆಳಿಗ್ಗೆ ಯಥಾಶಕ್ತಿಯಾಗಿ ಚಿನ್ನ, ಬೆಳ್ಳಿ ಮುಂತಾದವುಗಳಿಂದ ನಿರ್ಮಿಸಿದ ಹಸುವಿನ ಗೊರಸನ್ನು ಹಾಗೆಯೇ ಬೆಲ್ಲದಿಂದ ನಿರ್ಮಿಸಿದ ಗೋವರ್ಧನ ಪರ್ವತವನ್ನು ಪೂಜಿಸಿ ಗೋವಿಂದಃ ಪ್ರೀಯತಾಂ ಎಂದು ಬ್ರಾಹ್ಮಣನಿಗೆ ದಾನ ಮಾಡಬೇಕು. ನಂತರ ಅಚ್ಯುತನಿಗೆ ಸಾಷ್ಟಾಂಗ ಪ್ರಣಾಮ ಮಾಡಬೇಕು.

ಈ ವ್ರತವನ್ನು ಭಕ್ತಿ ಪೂರ್ವಕ ಮಾಡುವ ವ್ಯಕ್ತಿಯು ಸೌಭಾಗ್ಯ, ಲಾವಣ್ಯ, ಧನ, ಧಾನ್ಯ, ಉತ್ತಮ ಸಂತಾನ ಮೊದಲಾದ ಎಲ್ಲವನ್ನು ಪಡೆಯುತ್ತಾನೆ. ಅವನ ಮನೆಯು ಹಸು ಮತ್ತು ಕರುಗಳಿಂದ ತುಂಬಿರುತ್ತದೆ. ಮರಣಾನಂತರದಲ್ಲಿ ಆವನು ದಿವ್ಯಸ್ವರೂಪಧಾರಿಯಾಗಿ ದಿವ್ಯಾಲಂಕಾರಭೂಷಿತನಾಗಿ ವಿಮಾನದಲ್ಲಿ ಕುಳಿತು ಸ್ವರ್ಗಲೋಕವನ್ನು ಸೇರಿ ಅಲ್ಲಿ ದಿವ್ಯಶತವರ್ಷಗಳವರೆಗೆ ವಾಸಿಸಿ ನಂತರ ವಿಷ್ಣುಲೋಕಕ್ಕೆ ಹೋಗುತ್ತಾನೆ.

ಈ ಗೋಷ್ಪದ ತ್ರಿರಾತ್ರ ವ್ರತವನ್ನು ಮಾಡಿದವನು, ಗೋವಿಂದನ ಪೂಜೆಯುನ್ನು ಮಾಡುವವನು, ಹಾಗೆಯೇ ಗವ್ಯಪದಾರ್ಥಗಳನ್ನೇ ಊಟಮಾಡುವವನು ಗೋಲೋಕವನ್ನು ಹೊಂದುತ್ತಾನೆ.



# ಗೋವತ್ಸದ್ವಾದಶೀವ್ರತ

ಹಿಂದೆ ಕಾರ್ತಿಕ ಮಾಸದ ಕೃಷ್ಣಪಕ್ಷದ ದ್ವಾದಶೀದಿವಸ ಬ್ರಹ್ಮವಾದಿಗಳಾದ ಋಷಿಗಳು ವತ್ಸಸಹಿತವಾದ ಬಹುರೂಪಧಾರಿಣಿಯಾದ ಉಮಾದೇವಿಯರನ್ನು ನಂದಿನಿ ಎಂಬ ಹೆಸರಿನಿಂದ ಪೂಜೆಮಾಡಿದರು. ಈ ಕಾರಣದಿಂದ ಆ ದಿನವನ್ನು ಗೋವತ್ಸದ್ವಾದಶೀ ಎಂದು ಕರೆದರು. ನಂತರ ಈ ವ್ರತವು ಭೂಮಿಯಲ್ಲಿ ಪ್ರಚಾರಕ್ಕೆ ಬಂದಿತು.

ಕಾರ್ತಿಕಮಾಸ ಕೃಷ್ಣಪಕ್ಷ ದ್ವಾದಶೀದಿನ ಸಂಕಲ್ಪವನ್ನು ಮಾಡಿ ಶ್ರೇಷ್ಠವಾದ ಜಲಾಶಯದ ಬಳಿಹೋಗಿ ಸ್ನಾನಮಾಡಿ ನಿತ್ಯಾಹ್ನಿಕವನ್ನು ಪೂರೈಸಿ ಈ ವ್ರತವನ್ನು ಪ್ರಾರಂಭಿಸಬೇಕು. ಆ ದಿವಸ ಏಕಭುಕ್ತವನ್ನು ಮಾಡಬೇಕು. ಅನಂತರ ಮಧ್ಯಾಹ್ನ ಸಮಯದಲ್ಲಿ ಕರುವಿನಿಂದಸಹಿತವಾದ ಗೋವಿಗೆ ಗಂಧ, ಹೂ, ಅಕ್ಷತೆ, ಕುಂಕುಮ, ಅರ್ಪಿಸಿ, ದೀಪ, ಉದ್ದಿನವಡೆ, ಹೂ ಪುಷ್ಪ ಮಾಲೆಗಳಿಂದ ಆ ಗೋವನ್ನು ಪೂಜಿಸಿ ಈ ಮಂತ್ರವನ್ನು ಹೇಳಬೇಕು.

ಮಾತಾರುದ್ರಾಣಾಂ ದುಹಿತಾವಸೂನಾಂ ಸ್ವಸಾದಿತ್ಯಾನಾಂ ಅಮೃತಸ್ಯನಾಭಿಃ।
ಪ್ರನುವೋಚಂ ಚಿಕಿತುಷೇ ಜನಾಯ ಮಾಗಾಮನಾಗಾಮದಿತಿಂ ವಧಿಷ್ಟ ।
ನಮೋ ನಮಃ ಸ್ವಾಹಾ ॥ ( ಋ 8 -101-18)

ಈ ರೀತಿ ಪೂಜಿಸಿ ಗೋವಿಗೆ ಗ್ರಾಸವನ್ನು ಕೊಟ್ಟು ಕೆಳಗಿನ ಮಂತ್ರವನ್ನು ಹೇಳುತ್ತ ಗೋವನ್ನು ಮುಟ್ಟಿಕೊಂಡು ಪ್ರಾರ್ಥಿಸಿ ಕ್ಷಮಾಯಾಚನೆ ಮಾಡಬೇಕು.

ಓಂ ಸರ್ವದೇವ ಮಯೇ ದೇವಿ ಲೋಕಾನಾಂ ಶುಭ ನಂದಿನೀ ।
ಮಾತರ್ಮಮಾಭಿಲಷಿತಂ ಸಫಲಂ ಕುರು ನಂದಿನೀ ॥
( ಭವಿಷ್ಯಪುರಾಣ ಉತ್ತರಪರ್ವ) (69-85)

ನಂತರ ಗೋವಿಗೆ ನೀರನ್ನು ಪ್ರೋಕ್ಷಿಸಿ ಭಕ್ತಿಯಿಂದ ನಮಸ್ಕರಿಸಬೇಕು. ಆ ದಿನ ಬೇಯಿಸಿದ ಆಹಾರವನ್ನು ಸ್ವೀಕರಿಸದೇ ಬ್ರಹ್ಮಚರ್ಯ ಪೂರ್ವಕವಾಗಿ ನೆಲದ ಮೇಲೆ ಮಲಗಬೇಕು. ಸ್ತ್ರೀಯರು ಅಥವಾ ಪುರುಷರು ಈ ವ್ರತವನ್ನು ಮಾಡಬಹುದು. ಈ ವ್ರತದ ಪ್ರಭಾವದಿಂದ ವ್ರತವನ್ನು ಮಾಡಿದ ಎಲ್ಲರೂ ಇಹಲೋಕದಲ್ಲಿ ಸಮಸ್ತ ಸೌಖ್ಯಗಳನ್ನು ಅನುಭವಿಸಿ ಕೊನೆಗೆ ಗೋವಿನ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಗಳವರೆಗೆ ಗೋಲೋಕದಲ್ಲಿ ವಾಸ ಮಾಡುತ್ತಾರೆ. ಸಂದೇಹವಿಲ್ಲ.

ಈ ವ್ರತವು ಆಚರಣೆಯಲ್ಲಿ ಬಂದ ಬಗೆಗೆ ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಒಂದು ಕಥೆಯನ್ನು ಹೇಳುತ್ತಾನೆ.

ಕೃತಯುಗದಲ್ಲಿ ಪುಣ್ಯಕರವಾದ ಜಂಬು ಮಾರ್ಗ ( ಬರೋಡ )ದಲ್ಲಿ ನಾಮುವ್ರತಧರಾ ಎಂಬ ಪರ್ವತದ ಟಂಟಾವಿ ಎಂಬ ರಮಣೀಯ ಶಿಖರದಲ್ಲಿ ಶಂಕರನನ್ನು ಸಾಕ್ಷಾತ್ಕರಿಸಬೇಕೆಂಬ ಬಯಕೆಯಿಂದ ಕೋಟಿಗಟ್ಟಲೆ ಮುನಿಗಳು ತಪಸ್ಸು ಮಾಡುತ್ತಿದ್ದರು.

ಶ್ರೇಷ್ಠವಾದ ದಿವ್ಯ ಆರಣ್ಯಗಳಿಂದ ಶೋಭಿತವಾದ ಆ ಸ್ಥಳದಲ್ಲಿಯೇ ಭೃಗುಮಹರ್ಷಿಗಳ ಆಶ್ರಮವಿತ್ತು. ಇಂತಹ ಸ್ಥಳದಲ್ಲಿ ತಪಸ್ಸು ಮಾಡುತ್ತಿರುವ ಋಷಿಗಳಿಗೆ ದರ್ಶನ ಕೊಡುವುದಕ್ಕಾಗಿ ಶಂಕರನು ಒಬ್ಬ ವೃದ್ಧ ಬ್ರಾಹ್ಮಣನ ವೇಷವನ್ನು ಧರಿಸಿ ನಡುಗುತ್ತಾ ಕೈಯಲ್ಲಿ ಕೋಲನ್ನು ಹಿಡಿದು ಅಲ್ಲಿಗೆ ಬಂದನು. ಪಾರ್ವತಿಯು ಕೂಡ ಕರುವಿನಿಂದ ಕೂಡಿದ ಧೇನುರೂಪವನ್ನು ಸ್ವೀಕರಿಸಿ ಅಲ್ಲಿಗೆ ಬಂದಳು, ಆರು ಸ್ಥಾನಗಳಲ್ಲಿ ಉನ್ನತವಾದ, ಐದುಸ್ಥಾನಗಳಲ್ಲಿ ತಗ್ಗಾದ ಮಂಡೂಕ ನೇತ್ರೆಯಾದ, ಸುಂದರವಾದ ಬಾಲವುಳ್ಳ, ತಾಮ್ರದಂತೆ ಕೆಂಪಾದ ಸ್ತನಗಳುಳ್ಳ, ಬೆಳ್ಳಿಯಂತೆ ಉಜ್ವಲವಾದ ಕಟಿಭಾಗವುಳ್ಳ, ಸುಂದರವಾದ ಗೊರಸು ಮತ್ತು ಸುಂದರ ಮುಖವುಳ್ಳ ಬಿಳಿಯ ಬಣ್ಣದ ಸುಶೀಲೆಯಾದ, ಪುತ್ರಸ್ನೇಹವತಿಯಾದ, ಮಧುರವಾದ ಕ್ಷೀರವುಳ್ಳ, ಈ ರೀತಿಯಾಗಿ ಎಲ್ಲ ಶುಭಲಕ್ಷಣಗಳಿಂದ ಕೂಡಿದ, ಕರುವಿನಿಂದ ಸಹಿತವಾದ ಗೋರೂಪಧಾರಿಣಿಯಾದ, ಆ ಉಮಾದೇವಿಯರನ್ನು ವೃದ್ಧರೂಪೀ ಶಂಕರನು ಪ್ರಸನ್ನಚಿತ್ತನಾಗಿ ಮೇಯಿಸುತ್ತಿದ್ದನು.

ಧರ್ಮರಾಜನೇ! ಈ ವೃದ್ಧ ಬ್ರಾಹ್ಮಣನು ಮೆಲ್ಲಮೆಲ್ಲನೆ ಭೃಗುಋಷಿಗಳ ಆಶ್ರಮಕ್ಕೆ ಬಂದನು. ಮತ್ತು ಕುಲಪತಿಗಳಾದ ಭೃಗುಮಹರ್ಷಿಗಳ ಬಳಿಗೆ ಹೋಗಿ ಆ ಹಸುವನ್ನು ಎರಡು ದಿನ ನ್ಯಾಸರೂಪದಲ್ಲಿ ಇಟ್ಟು ಕಾಪಾಡಬೇಕೆಂದು ಹೇಳಿದನು. ಮಹಾಮುನಿಯೇ! ನಾನು ಇಲ್ಲಿ ಸ್ನಾನ ಮಾಡಿ ಎರಡು ದಿನಗಳ ನಂತರ ಬರುವೆನು ಅದುವರೆಗೆ ಈ ಗೋವನ್ನು ನೀವು ರಕ್ಷಣೆ ಮಾಡಿರಿ ಎನ್ನಲು ಎಲ್ಲರೂ ಆ ಗೋವನ್ನು ಕಾಪಾಡುತ್ತೇವೆಂದು ಪ್ರತಿಜ್ಞೆ ಮಾಡಿದರು.

ಶಂಕರನು ಅಲ್ಲಿಂದ ದೂರ ಹೋಗಿ ಮಾಯವಾದನು. ಸ್ವಲ್ಪ ಹೊತ್ತಿನ ನಂತರ ಒಂದು ದೊಡ್ಡ ಹುಲಿಯು ಅಲ್ಲಿಗೆ ಬಂದು, ಕರು ಮತ್ತು ಹಸು ಎರಡನ್ನೂ ಹೆದರಿಸಿತು. ಎಲ್ಲ ಋಷಿಗಳಿಗೆ ಭಯ ಉಂಟಾಯಿತು. ಹುಲಿಯನ್ನು ಅಲ್ಲಿಂದ ಓಡಿಸುವದಕ್ಕೆ ಅವರು ತಮಗೆ ತೋರಿದ ಎಲ್ಲ ಉಪಾಯ ಮಾಡಿದರು. ಇತ್ತ ಹುಲಿಯ ಭಯದಿಂದ ಕರುವಿನ ಸಮೇತವಾಗಿ ಹಸುವು ಕುಪ್ಪಳಿಸಿ ಬಾರಿ ಬಾರಿಗೂ ಅಂಬಾ, ಅಂಬಾ ಎಂದು ಕೂಗುತ್ತಿತ್ತು.

ಕೊನೆಗೆ ಹುಲಿಯ ಹೆದರಿಕೆಯಿಂದ ಹಸುವು ಓಡಲು ಪ್ರಾರಂಭಿಸಿತು. ಹಸುವಿನ ಗೊರಸುಗಳ ಗುರುತು ಶಿಲೆಯಲ್ಲಿಯೂ ಮೂಡಿತು. ಆಕಾಶದಲ್ಲಿ ದೇವತೆಗಳು ಮತ್ತು ಕಿನ್ನರರು ವ್ಯಾಘ್ರರೂಪಿಯಾದ ಶಂಕರನನ್ನು ಗೋರೂಪಿಣಿಯಾದ ಪಾರ್ವತಿಯನ್ನು ವಂದಿಸಿದರು. ಹಸುವಿನ ಹೆಜ್ಜೆಯ ಗುರುತು ಈಗಲೂ ಕೂಡ ನರ್ಮದಾ ನದಿಯ ಶಂಭುತೀರ್ಥದಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ.

ಈ ಶಂಭುತೀರ್ಥದಲ್ಲಿರುವ ಶಂಭುಲಿಂಗವನ್ನು ಯಾವನು ಸ್ಪರ್ಶ ಮಾಡುವನೋ ಅವನು ಗೋಹತ್ಯೆಯಿಂದ ಮುಕ್ತನಾಗುತ್ತಾನೆ. ಜಂಬೂ ಮಾರ್ಗದಲ್ಲಿರುವ ಆ ಮಹಾತೀರ್ಥದಲ್ಲಿ ಸ್ನಾನ ಮಾಡಿದರೆ ಬ್ರಹ್ಮಹತ್ಯಾದಿಪಾಪಗಳು ನಾಶವಾಗುತ್ತವೆ.

ಯಾವಾಗ ಕರುಸಹಿತವಾದ ಹಸುವು ಹುಲಿಯ ಹೆದರಿಕೆಯಿಂದ ಕೂಗುತ್ತಿತ್ತೋ ಆಗ ಋಷಿಗಳೆಲ್ಲ ಒಟ್ಟಾಗಿ ಸಿಟ್ಟಿನಿಂದ ಬ್ರಹ್ಮದೇವರು ಕೊಟ್ಟಿರುವ ಭಯಂಕರ ಶಬ್ದವನ್ನು ಮಾಡುವ ಒಂದು ಘಂಟೆಯನ್ನು ಬಾರಿಸಲು ಪ್ರಾರಂಭಿಸಿದರು. ಆ ಘಂಟೆಯ ಢಣ್ ಢಣ್ ಎಂಬ ಭಯಂಕರ ಶಬ್ಧವನ್ನು ಕೇಳಿ ಹುಲಿಯು ಕರು, ಹಸುಗಳನ್ನು ಬಿಟ್ಟು ಹೊರಟು ಹೋಯಿತು. ಈ ಘಟನೆ ನಡೆದ ಸ್ಥಳವನ್ನು ಬ್ರಾಹ್ಮಣರು ಢುಣ್ ಢಾಣ್ ಗಿರಿ ಎಂದು ಕರೆದರು. ಈ ಗಿರಿಯನ್ನು ನೋಡುವ ಮಾನವನು ಈಶ್ವರ ಅನುಗ್ರಹಕ್ಕೆ ಪಾತ್ರನಾಗಿ ನಿಸ್ಸಂದೇಹವಾಗಿ ಭಯರಹಿತನಾಗುತ್ತಾನೆ.

ಇಷ್ಟೆಲ್ಲಾ ಆದ ಸ್ವಲ್ಪವೆ ಸಮಯದಲ್ಲಿ ಶಂಕರನು ವ್ಯಾಘ್ರರೂಪ ಬಿಟ್ಟು ನಿಜರೂಪದಲ್ಲಿ ಪ್ರಕಟನಾದನು. ಪಾರ್ವತಿಯು ತನ್ನ ನಿಜಸ್ವರೂಪದಲ್ಲಿ ಪ್ರಕಟಳಾದಳು, ಈಶ್ವರನು ನಂದಿಯ ಮೇಲೆ ಆರೂಢನಾಗಿದ್ದನು. ಪಾರ್ವತಿಯು ಅವನ ವಾಮಭಾಗದಲ್ಲಿ ವಿರಾಜಮಾನಳಾಗಿದ್ದಳು. ಶಂಕರನು ವಿನಾಯಕ, ಸುಬ್ರಹ್ಮಣ್ಯ, ನಂದಿ ಮಹಾಕಾಲ, ಶೃಂಗಿ, ವೀರಭದ್ರ ಮೊದಲಾದವರಿಂದ, ಯೋಗಿಗಳಿಂದ ಪೂಜಿತನಾಗಿದ್ದನು.

ಧರ್ಮರಾಜನೇ! ಕಾರ್ತಿಕಮಾಸದ ಕೃಷ್ಣಪಕ್ಷದ್ವಾದಶೀ ದಿವಸ ಬ್ರಹ್ಮರ್ಷಿ ಮೊದಲಾದವರು ವತ್ಸಸಹಿತವಾದ ಬಹುರೂಪಧಾರಿಣಿಯಾದ ಉಮಾದೇವಿಯುರನ್ನು ನಂದಿನೀ ಎಂಬ ಹೆಸರಿನಿಂದ ಪೂಜೆ ಮಾಡಿದರು. ಈ ಕಾರಣದಿಂದ ಆದಿನವನ್ನು ಗೋವತ್ಸದ್ವಾದಶೀ ಎಂದು ಕರೆದರು.

( ಭವಿಷ್ಯಮಹಾಪುರಾಣ ಆಧಾರದಿಂದ )



# ಗೋವತ್ಸದ್ವಾದಶೀ ವ್ರತದ ಹಿರಿಮೆ (ಕಥೆ)

ಉತ್ತಾನಪಾದರಾಜನಿಗೆ ಸುನೀತಿ ಮತ್ತು ಸುರುಚಿ ಎಂಬ ಇಬ್ಬರು ಪತ್ನಿಯರಿದ್ದರು. ಸುನೀತಿಗೆ ಧ್ರುವನೆಂಬ ಮಗನಿದ್ದನು. ಸುನೀತಿಯು ತನ್ನ ಮಗನನ್ನು ಸುರುಚಿಗೆ ಒಪ್ಪಿಸಿ, ಸಖಿ ! ನಾನು ಯಾವಾಗಲೂ ಸೇವಾ ವ್ರತದಲ್ಲಿ ತತ್ಪರಳಾಗಿ ಇರುವುದರಿಂದ ನೀನೇ ಇವನನ್ನು ನೋಡಿಕೋ ಎಂದು ಹೇಳಿ ತನ್ನ ಕಾರ್ಯತತ್ಪರಳಾದಳು. ಸುರುಚಿಯು ಗೃಹಕಾರ್ಯನಿರ್ವಹಿಸುತ್ತ ಮಕ್ಕಳನ್ನು ನೋಡಿಕೊಳ್ಳುತ್ತಿದ್ದಳು.

ಸವತಿಯ ಮೇಲಿನ ದ್ವೇಷದಿಂದಾಗಿ ಒಂದು ದಿನ ಸಿಟ್ಟು ಮತ್ತು ಹೊಟ್ಟೆಕಿಚ್ಚಿನಿಂದ ಸುರುಚಿಯು, ಸುನೀತಿಯ ಮಗನಾದ ಧ್ರುವನನ್ನು ಸಾಯಿಸಿ ಬಿಟ್ಟಳು. ಆದರೆ ಧ್ರುವನು ಕೂಡಲೇ ಜೀವಿತನಾಗಿ ನಗುತ್ತ ತಾಯಿಯ ಮಡಿಲನ್ನು ಸೇರಿದನು.

ಈ ರೀತಿ ಸುರುಚಿಯು ಅನೇಕಬಾರಿ ಮಾಡಿದರೂ ಧ್ರುವನು ಬದುಕಿ ಬರುತ್ತಿದ್ದನು. ಸುರುಚಿಯು ಆಶ್ಚರ್ಯಚಕಿತಳಾಗಿ ಸುನೀತಿಯನ್ನು ಕೇಳಿದಳು. ದೇವಿಯೇ ! ಈ ವಿಚಿತ್ರ ಘಟನೆಯು ಯಾವ ವ್ರತದ ಫಲವೆಂಬುದು ನನಗರ್ಥವಾಗಲಿಲ್ಲ. ನೀನು ಯಾವ ವ್ರತ ಅನುಷ್ಠಾನ ಮಾಡಿರುವಿ ? ಮೃತ ಸಂಜೀವಿನೀ ವಿದ್ಯೆ ನಿನಗೆ ಕರಗತವಾಗಿದೆಯೋ ? ಹೇಗೆ ? ಸತ್ಯವಾಗಿ ಹೇಳು ಎಂದಾಗ ಸುನೀತಿಯು ಹೇಳತೊಡಗಿದಳು.

ತಂಗಿಯೇ ! "ನಾನು ಕಾರ್ತಿಕ ಮಾಸದ ಕೃಷ್ಣಪಕ್ಷ ದ್ವಾದಶೀದಿನ ಗೋವತ್ಸವ್ರತ ವನ್ನು ಮಾಡಿದ್ದೇನೆ. ಅದರ ಪ್ರಭಾವದಿಂದ ನನ್ನ ಮಗನು ಸತ್ತುಹೋದರೂ ಪುನಃ ಪುನಃ ಬದುಕಿ ಬರುತ್ತಾನೆ. ಯಾವಾಗ ನಾನು ಅವನನ್ನು ಸ್ಮರಿಸುವೆನೋ ಆಗ ಕೂಡಲೇ ನನ್ನ ಹತ್ತಿರ ಬಂದು ಬಿಡುತ್ತಾನೆ. ಈ ಗೋವತ್ಸದ್ವಾದಶೀ ವ್ರತವನ್ನು ಸುರುಚಿಯೇ ನೀನು ಮಾಡು. ಇದರಿಂದ ನಿನ್ನ ಅಪೇಕ್ಷಿತ ಇಷ್ಟಾರ್ಥಗಳು ಕೈಗೂಡುತ್ತವೆ" ಎಂದು ಹೇಳಿದಳು.

ಸುನೀತಿಯ ಮಾತಿನಂತೆ ಸುರುಚಿಯು ಕೂಡ ಈ ವ್ರತವನ್ನು ಅನುಷ್ಠಾನ ಮಾಡಿದಳು. ಇದರಿಂದಾಗಿ ಅವಳಿಗೆ ಎಲ್ಲ ಸುಖಪ್ರಾಪ್ತಿಯಾಯಿತು.

ಧ್ರುವನು ನಕ್ಷತ್ರರೂಪದಿಂದ ಆಕಾಶದಲ್ಲಿ ಉನ್ನತ ಸ್ಥಾನದಲ್ಲಿ ಇಂದಿಗೂ ರಾರಾಜಿಸುತ್ತಿದ್ದಾನೆ. ಧ್ರುವ ನಕ್ಷತ್ರನೋಡುವದರಿಂದ ಎಲ್ಲ ಪಾಪಗಳು ಪರಿಹಾರವಾಗುತ್ತವೆ.



# ಗೋಹತ್ಯೆ ಸಲ್ಲದು

"ಗಾವೋ ವಿಶ್ವಸ್ಯಮಾತರಃ"[1] ಗೋವುಗಳು ಜಗತ್ತಿಗೆ ಮಾತೃಸ್ಥಾನದಲ್ಲಿವೆ. ಇದರಿಂದಾಗಿ ಅವು ಪೂಜ್ಯತಮವಾಗಿವೆ. ಹುಟ್ಟು, ಸಾವಿನ ಸೂತಕ ಕಳೆಯಲು ಗೋವಿನ ಪಂಚಗವ್ಯದ ಅವಶ್ಯಕತೆ ಇದ್ದೇ ಇದೆ.

ವೈದ್ಯರು ಕೈಚೆಲ್ಲಿಕುಳಿತ ಕ್ಯಾನ್ಸರ್, ಮಧುಮೇಹ, ರಕ್ತದೊತ್ತಡ, ರೋಗಿಗಳು ಗೋಮೂತ್ರದ ನಿರಂತರ ಬಳಕೆಯಿಂದ ಗುಣಮುಖರಾದ ನಿದರ್ಶನಗಳಿದ್ದು ವೈಜ್ಞಾನಿಕವಾಗಿ ಗೋವಿಗೆ ತನ್ನದೇ ಆದ ವೈಶಿಷ್ಟ್ಯವಿದೆ. ಆಯುರ್ವೇದದ ಪ್ರಕಾರ ಗೋಮೂತ್ರ ಒಂದು ದಿವ್ಯರಸಾಯನ ವೆನಿಸಿದೆ.

ನಮ್ಮ ಪುರಾಣ, ಇತಿಹಾಸಗಳು ಹೇಳುವಂತೆ, ಗೋವಿನ ಸೇವೆಯಿಂದ ಗೋವಿನ ಆನುಗ್ರಹದಿಂದ ಪುರಾತನ ರಾಜರು, ಮಹರ್ಷಿಗಳನೇಕರು ತಮ್ಮ ಬದುಕಿನಲ್ಲಿ ಶಾಂತಿ ನೆಮ್ಮದಿಯನ್ನು ಪಡೆದುಕೊಂಡಿದ್ದರು.

ಹೀಗೆ ಮಾತೃಸ್ಥಾನದಲ್ಲಿರುವ, ಪೂಜ್ಯತಮವಾದ, ಮಾನವ ಕುಲಕ್ಕೆ ಉಪಕಾರಿಯೆನಿಸಿದ ಗೋವನ್ನು ಹತ್ಯೆ ಮಾಡುವುದು ಎಂದಿಗೂ ಸಲ್ಲದು.

ಕ್ರಿಸ್ತ ಪೂರ್ವ ಭಾರತದಲ್ಲಿ ಗೋವುಗಳು ಸ್ವಾಭಾವಿಕವಾಗಿ ಸಾಯುತ್ತಿದ್ದವು. ಋಗ್ವೇದದಲ್ಲಿ ಗೋವನ್ನು ಕೊಲ್ಲಲ್ಪಡದ ಪ್ರಾಣಿ ಎಂದು ತಿಳಿಸಲಾಗಿದೆ.[2]

ಋಗ್ವೇದದಲ್ಲಿ ಇನ್ನೊಂದೆಡೆಗೆ ಗೋಸ್ವರೂಪಿಣಿಯಾದ ಇವಳನ್ನು ಹಿಂಸೆ ಮಾಡಬೇಡಿರಿ ಎಂದಾಗಿ ಹೇಳಿದ್ದುಂಟು.[3]

ಭಾರತದಲ್ಲಿ ಗೋವನ್ನು ಹೊರ ಸಾಗಾಟಕ್ಕಾಗಿ ಅಥವಾ ಮಾಂಸಕ್ಕಾಗಿ ಯಾವತ್ತೂ ಬಳಸುತ್ತಿರಲಿಲ್ಲ. ಭಾರತಕ್ಕೆ ಆಗಮಿಸಿದ ಚೀನಿ ಯಾತ್ರಿಕ ಹ್ಯುಯೆನ್‌ತ್ಸಾಂಗನು ಭಾರತದಲ್ಲಿ ಗೋಮಾಂಸ ಭಕ್ಷಣೆಯು ನಿಷೇಧಿಸಲ್ಪಟ್ಟಿತ್ತು, ಎಂದಾಗಿ ತಿಳಿಸಿದ್ದಾನೆ.

---

1) ಭುಕ್ತ್ವಾ ಶುಷ್ಕಾಣಿ ತೃಣಾನಿ ಪೀತ್ವಾ ತೋಯಂ ಜಲಾಶಯಾತ್ ।
ದುಗ್ಧಂ ದದತಿ ಲೋಕೇಭ್ಯೋ ಗಾವೋ ವಿಶ್ವಸ್ಯ ಮಾತರಃ ॥

2) ಅಘ್ನ್ಯಾ ಎಂಬುದು ಋಗ್ವೇದದಲ್ಲಿ ಬರುವ ಗೋವಿನ ಹೆಸರು ಈ ಶಬ್ದದ ಅರ್ಥ ಕೊಲ್ಲಲ್ಪಡದ ಪ್ರಾಣಿ ಎಂದು ಯಾಸ್ಕರು ಅಹಂತವ್ಯಾ ಭವತಿ ಇತಿ ಅಘುಘ್ನೀ ಎಂಬುದಾಗಿ ಹೇಳಿದ್ದಾರೆ.

3) ಮಾ ಗಾಂ ಅನಾಗಾಂ ಅದಿತಿಂ ವಧಿಷ್ಟ. ಋಗ್ವೇದ ( 8-101-18)

ವಿಜಯನಗರ ಸಾಮ್ರಾಜ್ಯಕ್ಕೆ ಆಗಮಿಸಿದ ಪೋರ್ಚುಗೀಸ್ ಪ್ರಯಾಣಿಕ ಪೇಸ್, ಭಾರತದಲ್ಲಿ ಜನರು ಗೋಮಾಂಸ ಹೊರತಾದ ಮಾಂಸವನ್ನು ತಿನ್ನುತ್ತಾರೆಂದಿದ್ದಾನೆ. [4]

ಗೋಹತ್ಯಾ ದೋಷಕ್ಕೆ ಕುಷ್ಠರೋಗ ಬರುವುದೆಂದು ನಮ್ಮ ಮಹರ್ಷಿಗಳು ಎಚ್ಚರಿಸಿದ್ದಾರೆ. ಎಲ್ಲ ಸ್ಮೃತಿಕಾರರು ಗೋಹತ್ಯೆಯನ್ನು ನಿಷೇಧಿಸುವುದು ಕಂಡುಬರುತ್ತದೆ.

ಹೀಗೆ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಗೋಹತ್ಯೆಯನ್ನು ನಿಷೇಧಿಸಿದ್ದರೂ ಕೂಡ ಭಾರತದೇಶದಲ್ಲಿ ಗೋವುಗಳನ್ನು ಕಸಾಯಿ ಖಾನೆಗಳಿಗೆ ಕಳಿಸಲಾಗುತ್ತಿದೆ. ಅಲ್ಲಿ ಅವುಗಳ ಹತ್ಯೆ ರಾಜಾರೋಷವಾಗಿ ಆಗುತ್ತಿದೆ.

ಭಾರತ ದೇಶದ 36 ಸಾವಿರ ಕಸಾಯಿಖಾನೆಗಳು ವರ್ಷಕ್ಕೆ 2.4 ಕೋಟಿ ಜಾನುವಾರುಗಳ ಜೀವವನ್ನು ಬಲಿತೆಗೆದುಕೊಳ್ಳುತ್ತಿವೆ. ಕಾರಣ ಈ ಗೋವುಗಳ ಬರ್ಬರ ಹತ್ಯೆಯನ್ನು ನಿಲ್ಲಿಸಲು ಎಲ್ಲ ಭಾರತೀಯರು ಕಂಕಣಬದ್ಧರಾಗಿ ಕಸಾಯಿಖಾನೆಗಳನ್ನು ಮುಚ್ಚಿಸಲು ಹೆಣಗಬೇಕಾಗಿದೆ.

ಗೋವುಗಳು ಸಾಕುವವರಿಗೆ ಹೊರೆಯಾಗಿ ಇರುವುದಿಲ್ಲ ಎಂಬುದು ಗಮನದಲ್ಲಿಡಬೇಕಾದ ಅಂಶ. ಮಾನವನಿಗೆ ಎಲ್ಲವಿಧದಲ್ಲಿಯೂ ನೇರವಾಗಿ "ಕಾಮಧೇನು"ಎಂದು ಹೆಸರು ಪಡೆದಿರುವ ಗೋವುಗಳು ವೃದ್ಧಾಪ್ಯದಲ್ಲಿಯೂ. ಕಾಣಿಕೆ ನೀಡುತ್ತವೆ.

ಇಟ್ಟರೆ ಶಗಣಿ, ತಟ್ಟಿದರೆ ಕುರುಳು, ಸುಟ್ಟರೆ ವಿಭೂತಿ. ಅಂತೆಯೇ ಈ ಗೋವುಗಳ ಶಗಣಿಯನ್ನು ವಿದ್ಯುತ್ ಉತ್ಪಾದನೆಗೆ ಬಳಸಲು ಚಿಂತನೆ ನಡೆಸಲಾಗುತ್ತಿದೆ.

ಗೋಶಾಲೆಗಳ ಶಗಣಿಯನ್ನು ಬಳಸಿ ಗೋಬರಗ್ಯಾಸನಿಂದ ವಿದ್ಯುತ್ ಉತ್ಪಾದಿಸುವ ಯೋಜನೆ ಇದೆ.

ಹೀಗೆ ಅನೇಕ ದೃಷ್ಟಿಕೋನಗಳಿಂದ ವಿಚಾರಿಸಿದಾಗ ಗೋವು ಮಾನವನಿಗೆ ಹಿತಕಾರಿ, ಉಪಕಾರಿ, ಆಗಿರುವುದರಿಂದ ಗೋಹತ್ಯೆ ಎಂದಿಗೂ ಸಲ್ಲದು , ಅಷ್ಟೇ ಅಲ್ಲ ಇನ್ನೊಂದು ಮಾತನ್ನು ಇಲ್ಲಿ ನೆನಪಿಡಬೇಕು. ಮನುಷ್ಯನಿಗೆ ಮುಪ್ಪಿನಲ್ಲಿ ವೃದ್ಧಾಪ್ಯ ವೇತನ ಇತ್ಯಾದಿಗಳು ಇರುವದುಂಟು, ಆದರೆ ಮುದಿತನ ಹೊಂದಿದ ಗೋವುಗಳಿಗೆ ಇದಾವುದೂ ಇಲ್ಲ. ಕಾರಣ ಅವುಗಳನ್ನು ಸಾಕಿಸಲಹುವದು ಮಾನವ ಜೀವನದ ಅವಿಭಾಜ್ಯ ಅಂಗವಾಗಿದೆ- ಇದು ಆ ಗೋವುಗಳಿಗೆ ನಾವೆಲ್ಲ ಸಲ್ಲಿಸಬೇಕಾದ ಗೌರವವಾಗಿದೆ. ಈ ಕಾರಣದಿಂದ ಕೂಡ ಗೋಹತ್ಯೆಸಲ್ಲದು.

---

4) H.G. Rawlinson - India A short Cultural History.

ಮಾಂಸವನ್ನು ಮಾರುವ ಸಲುವಾಗಿ ಯಾವ ಸ್ವೇಚ್ಛಾಚಾರಿಯು ಗೋವನ್ನು ಹತ್ಯೆ ಮಾಡುವನೋ, ಗೋಮಾಂಸವನ್ನು ಭಕ್ಷಿಸುವನೋ ಮತ್ತು ಯಾವ ಸ್ವಾರ್ಥಪರರಾದ ಮನುಷ್ಯರು ಗೋವನ್ನು ವಧಿಸಲು ಕಟುಕನಿಗೆ ಅನುಮತಿ ಕೊಡುವರೋ ಇವರೆಲ್ಲರೂ ಮಹಾಪಾಪಕ್ಕೆ ಗುರಿಯಾಗುತ್ತಾರೆ. [5]

ಗೋವನ್ನು ಕೊಲ್ಲುವವನಾಗಲೀ, ಗೋಮಾಂಸವನ್ನು ತಿನ್ನುವವನಾಗಲೀ, ಗೋಹತ್ಯೆಗೆ ಅನುಮತಿಸುವವನಾಗಲೀ ಅವನು ಆ ಕೊಲೆಗೀಡಾದ ಹಸುವಿನ ದೇಹದಲ್ಲಿ ಎಷ್ಟು ರೋಮಗಳಿರುವವೋ ಅಷ್ಟು ವರ್ಷಗಳ ಕಾಲ ನರಕದಲ್ಲಿ ಬಿದ್ದಿರಬೇಕಾಗುತ್ತದೆ.[6]

ವಂದೇ ಗೋಮಾತರಮ್



5) ವಿಕ್ರಯಾರ್ಥಂ ಹಿ ಯೋ ಹಿಂಸ್ಯಾತ್ ಭಕ್ಷಯೇದ್ವಾ ನಿರಂಕುಶಃ।
ಘಾತಯಾನಂ ಹಿ ಪುರುಷಂ ಯೇಽನುಮನ್ಯೇಯುರರ್ಥಿನಃ ॥
ಶ್ರೀ ಮನ್ ಮಹಾಭಾರತ

6) ಘಾತಕಃ ಖಾದಕೋವಾಪಿ ತಥಾ ಯಶ್ಚಾನುಮನ್ಯತೇ ।
ಯಾವಂತಿ ತಸ್ಯಾ ರೋಮಾಣಿ ತಾವದ್ವರ್ಷಾಣಿ ಮಜ್ಜತಿ ॥
ಶ್ರೀ ಮನ್ ಮಹಾಭಾರತ

# ತಿಳಿಯದೇ ಮಾಡಿದ ಗೋಹತ್ಯೆಗೆ ಪ್ರಾಯಶ್ಚಿತ್ತ

ಬುದ್ಧಿಪೂರ್ವಕ ಗೋಹತ್ಯೆ ಮಾಡುವವನಿಗೂ, ಬುದ್ಧಿಪೂರ್ವಕ ನಾರಾಯಣನನ್ನು ನಿಂದಿಸುವವನಿಗೂ ಪ್ರಾಯಶ್ಚಿತ್ತವಿಲ್ಲ.

ದ್ವಯೋರ್ವೈ ನಿಷ್ಕೃತಿರ್ನಾಸ್ತಿ ಪಾಪಪುಂಜಕೃತೋಸ್ತಯೋಃ ।
ಮತ್ಯಾಗೋವಧಕರ್ತುಶ್ಚ ನಾರಾಯಣ ವಿನಿಂದಿತುಃ ॥

ಶ್ರೀ ಪದ್ಮ ಮಹಾಪುರಾಣ

ಗೋವುಗಳಿಗೆ ಮನಸ್ಸಿನಲ್ಲಿ ಕೇಡುಬಯಸುವವನು ಅತ್ಯಂತ ಅಧಮನು. ಅವನಿಗೆ ಹದಿನಾಲ್ಕು ಮನ್ವಂತರಕಾಲ ನರಕವಾಸವಿದೆ. ಒಮ್ಮೆ ಹರಿನಿಂದೆ ಮಾಡುವವನೂ ದುರ್ಭಾಗ್ಯನೇ. ಅವನು ಪುತ್ರಪೌತ್ರರಿಂದ ಕೂಡಿ ನರಕಕ್ಕೆ ಹೋಗುತ್ತಾನೆ. ಆದ್ದರಿಂದ ಬುದ್ಧಿಪೂರ್ವಕ ಹರಿನಿಂದೆ, ಗೋಹತ್ಯೆ, ಹಿಂಸೆ ಮಾಡುವವನಿಗೆ ನರಕದಿಂದ ಬಿಡುಗಡೆ ಇಲ್ಲವೇ ಇಲ್ಲ.

ಋತಂಭರ ರಾಜನಿಗೂ ಜಾಬಾಲಿ ಮುನಿಗಳಿಗೂ ನಡೆದ ಸಂವಾದವನ್ನು ಇಲ್ಲಿ ವಿವರಿಸಲಾಗಿದೆ.

ಋತಂಭರ ರಾಜನು ಗೋಸೇವೆ ಮಾಡುತ್ತ ಅರಣ್ಯದಲ್ಲಿರುವ ಕಾಲದಲ್ಲಿ, ಒಂದು ದಿನ ನಿಶ್ಚಿಂತೆಯಿಂದ ಹುಲ್ಲು ಮೇಯುವ ಗೋವನ್ನು ಸಿಂಹವೊಂದು ಬಂದು ಕೊಂದುಹಾಕಿತು. ಗೋವಿನ ಆಕ್ರಂದನ ಕೇಳಿದ ರಾಜ ದುಃಖ ತಡೆಯಲಾರದೆ ಅತ್ತುಬಿಟ್ಟ. ಜಾಬಾಲಿ ಮುನಿಗಳ ಬಳಿಗೆ ಬಂದು ಗೋವಿನ ಮರಣಕ್ಕೆ ಪ್ರಾಯಶ್ಚಿತ್ತವೇನೆಂದು ಕೇಳಿದ. ಆಗ ಜಾಬಾಲಿ ಮುನಿಗಳು ಹೇಳುತ್ತಾರೆ.

ರಾಜನೇ ! ತಿಳಿಯದೇ ಮಾಡಿದ ಗೋಹತ್ಯೆಗೆ ಪ್ರಾಯಶ್ಚಿತ್ತವಿದೆ. ಅದಕ್ಕಾಗಿ ಶ್ರೀರಾಮಭಕ್ತನು, ಜ್ಞಾನಿಯೂ ಆದ ಋತುಪರ್ಣರಾಜನ ಬಳಿಗೆ ಹೋಗು. ಈ ಗೋವಧೆಗೆ ಪ್ರಾಯಶ್ಚಿತ್ತವನ್ನು ಹೇಳುತ್ತಾನೆ.

ಕೂಡಲೇ ಆ ಋತಂಭರ ರಾಜನು ಋತುಪರ್ಣರಾಜನ ಹತ್ತಿರ ಹೋಗಿ ಪ್ರಮಾದವಶಾತ್ ತನ್ನಿಂದಾದ ಗೋ ವಧೆಯನ್ನು ತಿಳಿಸಿ ಅದಕ್ಕೆ ಪ್ರಾಯಶ್ಚಿತ್ತವೇನೆಂದು ಕೇಳುತ್ತಾನೆ. ಈ ಮಾತಿಗೆ ಋತುಪರ್ಣ ಹೇಳುತ್ತಾನೆ.

ಜಾಬಾಲಿ ಮುನಿಗಳಂಥ ಶಾಸ್ತ್ರಜ್ಞರ ಮುಂದೆ ನಾನಾರು ? ನಾನು ವಿದ್ವಾಂಸನೆಂದು ತಿಳಿದಿರುವ ನೀನು ಮೂರ್ಖ. ಅವರನ್ನು ಬಿಟ್ಟು ಬರಬಾರದಾಗಿತ್ತು. ಇರಲಿ, ನನ್ನಲ್ಲಿ ಅಷ್ಟೊಂದು ಶ್ರದ್ಧೆ ಇದ್ದರೆ ಹೇಳುತ್ತೇನೆ ಕೇಳು.

ಯಾವ ಕಪಟತನವಿಲ್ಲದೆ ತ್ರಿಕರಣ ಶುದ್ಧನಾಗಿ ಶ್ರೀರಾಮನನ್ನು ಸೇವೆ ಮಾಡಿ ಒಲಿಸಿಕೋ ಅವನೊಲಿದರೆ ನೀನು ಬಯಸಿದ್ದೆಲ್ಲವನ್ನು ನೀಡುವನು. ತಿಳಿಯದೇ ಮಾಡಿದ ಗೋಹತ್ಯೆಯ ಪಾಪವನ್ನು ಕಳೆಯುವನು. ಶ್ರೀರಾಮಸ್ಮರಣೆಯಿಂದ ಪರಿಶುದ್ಧನಾಗಿ

ಒಳ್ಳೆಯ ಬ್ರಾಹ್ಮಣನಿಗೆ ಗೋದಾನ ಮಾಡು. ಯಥೋಕ್ತವಾಗಿ ಸುವರ್ಣ ದಾನವನ್ನು ಮಾಡು. ಆಗ ನಿನ್ನ ಪಾಪ ತೊಲಗುತ್ತದೆ.

ಇದನ್ನು ಕೇಳಿ ತಿಳಿದುಕೊಂಡು ಋತಂಭರನು ಶ್ರೀರಾಮಸ್ಮರಣೆಯನ್ನು ಮಾಡುತ್ತ ಗೋದಾನವನ್ನು ಮಾಡಿ, ಕಾಡಿನಲ್ಲಿ ಗೋವುಗಳನ್ನು ಮೇಯಿಸುತ್ತ ಹಿಂದಿನವರು ಮಾಡಿದಂತೆ ಗೋವ್ರತವನ್ನು ಮಾಡುತ್ತಾನೆ. ಈ ರಾಜನ ಸೇವೆಯಿಂದ ಸಂತುಷ್ಟಳಾದ ಕಾಮಧೇನುವು ಒಂದು ದಿನ ಮೈದೋರಿ ರಾಜನೇ! ನಿನ್ನ ಅಭೀಷ್ಟವೇನು ಕೇಳಿಕೋ ಎನ್ನಲು ರಾಜನು "ದೇವಿ! ರಾಮಭಕ್ತನೂ, ಪಿತೃಭಕ್ತನೂ, ಧರ್ಮಿಷ್ಠನೂ ಆದ ಸುಂದರನಾದ ಮಗನನ್ನು ಕರುಣಿಸು" ಎಂದು ಬೇಡಿಕೊಳ್ಳುತ್ತಾನೆ. ಆಗ ಕಾಮಧೇನು ಆ ವರವಿತ್ತು ಅದೃಶ್ಯಳಾಗುತ್ತಾಳೆ.

ಕಾಲಕ್ರಮದಲ್ಲಿ ರಾಜನಿಗೆ ಪುತ್ರೋತ್ಸವವಾಯಿತು. ಆ ಪುತ್ರನು ಶ್ರೀ ರಾಮಭಕ್ತ, ಪಿತೃಭಕ್ತ, ಪರಾಕ್ರಮಿ ಆಗಿದ್ದನು. ಅವನು ವಯಸ್ಸಿಗೆ ಬಂದಕೂಡಲೇ ಋತಂಭರನು ಅವನಿಗೆ ರಾಜ್ಯವನ್ನೊಪ್ಪಿಸಿ, ತಪಸ್ಸಿಗಾಗಿ ಕಾಡಿಗೆ ತೆರಳಿ ಅಲ್ಲಿ ಹೃಷೀಕೇಶನನ್ನು ಭಕ್ತಿಯಿಂದ ಆರಾಧಿಸಿ ಹರಿಪದವನ್ನೈದಿದನು.



# ಶುದ್ಧಿದಾಯಕ "ಪಂಚಗವ್ಯ" ತಯಾರಿಕೆ

ಭಾರತೀಯ ಸಂಸ್ಕೃತಿಯಲ್ಲಿ ಯಾವುದೇ ಅಪವಿತ್ರ ಸ್ಥಿತಿಯಿಂದ ಪವಿತ್ರತೆ ಹೊಂದಲು ಪಂಚಗವ್ಯ ಪ್ರಾಶನವನ್ನು ಹೇಳಿದ್ದಾರೆ. ಜನನಾಶೌಚ, ಮರಣಾಶೌಚಗಳಲ್ಲಿ ಇದು ಅನಿವಾರ್ಯವೇ ಆಗಿದೆ.

ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ, ಗೋಘೃತ ಮತ್ತು ಕುಶೋದಕ ಇವುಗಳನ್ನು ಸರಿಯಾದ ಪ್ರಮಾಣದಲ್ಲಿ ಮಂತ್ರ ಪುರಸ್ಸರವಾಗಿ ಕೂಡಿಸಿದಾಗ ಪಂಚಗವ್ಯವು ತಯಾರಾಗುತ್ತದೆ. [1]

ಆಚಮನ, ಸಂಕಲ್ಪ ಮಾಡಿ ಶ್ರೀವಿಷ್ಣುಪ್ರೀತ್ಯರ್ಥಂ, ಶರೀರಶುಧ್ಯರ್ಥಂ ಪಂಚಗವ್ಯಮೇಲನಂ ಕರಿಷ್ಯೇ ॥ ಎಂದು ಹೇಳಬೇಕು.

ಪಂಚಗವ್ಯ ತಯಾರಿಸುವ ಶಾಸ್ತ್ರೀಯ ವಿಧಾನ ಕೆಳಗಿನಂತೆ ಇದೆ.

| ಅ. ನಂ. | ಪದಾರ್ಥ | ಆಕಳಬಣ್ಣ | ಪ್ರಮಾಣ | ಮಂತ್ರ- ಉಚ್ಚಾರಣೆ (ಮೇಲನ ಮಾಡುವಾಗ) |
|---|---|---|---|---|
| 1) | ಗೋಮೂತ್ರ | ಕಪ್ಪು | 40 ಗ್ರಾಂ | ಓಂ ತತ್ಸವಿತುಃ ವರೇಣ್ಯಂ .... |
| 2) | ಗೋಮಯ | ಬಿಳಿ | ಹೆಬ್ಬೆರಳಿನ ಅರ್ಧದಷ್ಟು | ಓಂ ಗಂಧದ್ವಾರಾ ......... |
| 3) | ಗೋಕ್ಷೀರ | ತಾಮ್ರವರ್ಣ | 280 ಗ್ರಾಂ | ಓಂ ಆಪ್ಯಾಯಸ್ವ ......... |
| 4) | ಗೋದಧಿ | ಕೆಂಪು | 120 ಗ್ರಾಂ | ಓಂ ದಧಿಕ್ರಾವ್ಣೋ ......... |
| 5) | ಗೋಘೃತ | ಕಂದು | 40 ಗ್ರಾಂ | ಓಂ ಶುಕ್ರಮಸಿ ಜ್ಯೋತಿರಸಿ .... |
| 6) | ಕುಶೋದಕ ದರ್ಭೆನೀರು | - | 40 ಗ್ರಾಂ | ಓಂ ಭೂರ್ಭುವಃಸ್ವಃ ......... |

ಈ ಎಲ್ಲ ಪದಾರ್ಥಗಳನ್ನು ಸೇರಿಸಿ ಅರಳಿಕಡ್ಡಿಯನ್ನು ಹಿಡಿದುಕೊಂಡು ಓಂಕಾರ ಪೂರ್ವಕವಾಗಿ ಆಲೋಡನೆ ಮಾಡಬೇಕು.

ಈ ಮುಂದೆ ಹೇಳುವ ಪ್ರಾಶನ ಮಂತ್ರವನ್ನು ಪಠಿಸುತ್ತ 3 ಬಾರಿ ತೆಗೆದುಕೊಳ್ಳಬೇಕು. ಮತ್ತು ಆಚಮನ ಮಾಡಬೇಕು.

---

(1) ಗೋಮೂತ್ರೇಕ ಪಲಂ ದದ್ಯಾದಂಗುಷ್ಠಾರ್ಧಂತು ಗೋಮಯಂ।
ಕ್ಷೀರಂ ಸಪ್ತಪಲಂ ದದ್ಯಾತ್ ದಧಿ ತ್ರಿಪಲಮುಚ್ಯತೇ ॥
ಘೃತಮೇಕಪಲಂ ದದ್ಯಾತ್ ಕುಶಮೇಕೋದಕಂ ಪಲಂ ॥ ಹಾಗೂ
ಗೋಮೂತ್ರಂ ಸ್ಥಾಪಯೇತ್ ಪೂರ್ವೇ ಗೋಮಯಂ ದಕ್ಷಿಣೇತಥಾ ।
ಕ್ಷೀರಂತು ಪಶ್ಚಿಮೇ ಸ್ಥಾಪ್ಯ ಉತ್ತರೇ ದಧಿ ಕೀರ್ತಿತಮ್ ।
ವಾಯವ್ಯೇತು ಘೃತಂ ಸ್ಥಾಪ್ಯ ಈಶಾನ್ಯಂ ತು ಕುಶೋದಕಮ್ ॥

ಓಂ ಯತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ ।
ಪ್ರಾಶನಂ ಪಂಚಗವ್ಯಸ್ಯ ದಹತ್ಯಗ್ನಿರಿವೇಂಧನಂ ॥

ಎಂದು ಸ್ವೀಕರಿಸಿ ಶ್ರೀಕೃಷ್ಣಾರ್ಪಣಮಸ್ತು ಹೇಳಬೇಕು. ಇನ್ನು ಮೇಲೆ ತಿಳಿಸಿದ ವಿಭಿನ್ನ ಬಣ್ಣದ ಆಕಳು ಸಿಗದಿದ್ದರೆ ಕಂದು ಬಣ್ಣದ ಆಕಳದಿಂದ ಈ ಎಲ್ಲ ಐದು ಪದಾರ್ಥ ಸಂಗ್ರಹಿಸಬೇಕು. ಈ ಪಂಚಗವ್ಯವು ಕಾಲರಾ, ಕ್ಷಯ ಹಾಗೂ ಮೈಲಿಬೇನೆಗಳಿಗೆ ರೋಗ ಪ್ರತಿಬಂಧಕ ಚುಚ್ಚುಮದ್ದು ಎನಿಸಿದೆ. ಆದ್ದರಿಂದಲೇ ಮಳೆಗಾಲದ ಮಧ್ಯದಲ್ಲಿ ಉಪಾಕರ್ಮದ ದಿನದಂದು ಪಂಚಗವ್ಯವನ್ನು ಅನಿವಾರ್ಯವಾಗಿ ತೆಗೆದುಕೊಳ್ಳಬೇಕೆಂದು ವಿಧಿಸಿದ್ದಾರೆ.



# ಗೋಮಯ ಇತ್ಯಾದಿ ಪಂಚಗವ್ಯ ಪದಾರ್ಥಗಳ ಔಷಧೀಯ ಗುಣಗಳು

**1) ಗೋಮಯ :**

ಗೋಮಯವು ರೋಗ ನಾಶಕ ಗುಣವನ್ನು ಹೊಂದಿದೆ. ಅದನ್ನು ಒಣಗಿಸಿ ಭಸ್ಮ ಮಾಡಿ ಉಪಯೋಗಿಸಿದರೂ ತನ್ನ ಗುಣವನ್ನು ಬಿಡದೇ ಇರುವುದು ಅದರ ವೈಶಿಷ್ಟ್ಯವಾಗಿದೆ. ಇಟಲಿಯ ವಿಜ್ಞಾನಿ ಡಾ।। ಬ್ರಿಗೇಡ ಇವರು ತಮ್ಮ ಸಂಶೋಧನೆಯಿಂದ ಆಕಳ ತಾಜಾ ಶಗಣಿಯ ವಾಸನೆಯಿಂದ ಜ್ವರ ಮತ್ತು ಮಲೇರಿಯಾದ ರೋಗಾಣುಗಳು ನಾಶ ಹೊಂದುತ್ತವೆಂದು ಕಂಡುಹಿಡಿದಿದ್ದಾರೆ. ಗೋವಿನ ಶಗಣಿಯಂಥ ಕೀಟನಾಶಕ ಶಕ್ತಿ ಬೇರೊಂದು ಇಲ್ಲ. ಗೋವಿನ ಶಗಣಿಯಲ್ಲಿ ಮತ್ತು ಅದರ ಜ್ವಲನದಿಂದ ಉತ್ಪನ್ನವಾದ ಹೊಗೆಯಲ್ಲಿ ಔಷಧಯುಕ್ತ ಗುಣಗಳು ಇರುತ್ತವೆ. ಹಿಂದೆ ತ್ವಚರೋಗಕ್ಕೆ ಮತ್ತು ಗಾಯಗಳಿಗೆ ಗೋಮಯವನ್ನು ಲೇಪಿಸುತ್ತಿದ್ದರು. ಇದರಿಂದ ರಕ್ತಸ್ರಾವವು ಕಡಿಮೆಯಾಗುತ್ತದೆ. ಸುಟ್ಟ ಗಾಯಗಳೂ ಗುಣ ಹೊಂದುತ್ತವೆ. ಗೋಮಯವನ್ನು ಶಾಸ್ತ್ರೀಯ ಗೊಬ್ಬರವನ್ನಾಗಿ ಪರಿವರ್ತಿಸಿ ನೈಸರ್ಗಿಕ ಒಕ್ಕಲುತನಕ್ಕೆ ಉಪಯೋಗಿಸಿ, ಸತ್ವಯುತ ಹಾಗು ಆರೋಗ್ಯಯುತ ಕಾಯಿಪಲ್ಯ, ಧಾನ್ಯಗಳನ್ನು ಬೆಳೆಯಬಹುದು.

**2) ಗೋಮೂತ್ರ :**

ಗೋವಿನ ಮೂತ್ರವು ಸಹ ಗೋಮಯದಂತೆ ರೋಗ ನಿವಾರಕ ಗುಣ ಹೊಂದಿದೆ. ವಾರಕ್ಕೊಮ್ಮೆ ಬೆಳಿಗ್ಗೆ 1 ಕಪ್ ಗೋಮೂತ್ರ ಕುಡಿಯುವದರಿಂದ ಶರೀರದಲ್ಲಿಯ ಕಶ್ಮಲವು ಹೊರ ಬೀಳುತ್ತದೆ. ಉದರ ವಿಕಾರ, ಪಾಂಡುರೋಗ, ತ್ವಚೆರೋಗ, ವಿಷಬಾಧೆ, ಕೆಮ್ಮು, ಕುಷ್ಠರೋಗ, ಮೂಲವ್ಯಾಧಿ ಮುಂತಾದ ರೋಗಗಳ ತೀವ್ರತೆಯನ್ನು ಕಡಿಮೆ ಮಾಡುತ್ತದೆ. ಅಗ್ನಿಹೋತ್ರದ ಭಸ್ಮ ಗೋಮೂತ್ರ, ನೀರು ಇವುಗಳ ಮಿಶ್ರಣವನ್ನು 3 ದಿನ ಇಟ್ಟು ಬೆಳೆಗಳಿಗೆ ಸಿಂಪಡಿಸಿದ್ದಾದರೆ ರೋಗ ಮತ್ತು ಕೀಟಗಳ ನಾಶವಾಗುತ್ತದೆ. ಗೋಮೂತ್ರದಿಂದ ಅನೇಕ ರೋಗಗಳನ್ನು ಚಿಕಿತ್ಸೆಗೊಳಿಸಬಹುದಾಗಿದೆ. ಕೆಲವನ್ನು ಇಲ್ಲಿ ತಿಳಿಸಲಾಗಿದೆ.

1) ಗೋಮೂತ್ರ ಮಣ್ಣು ಮತ್ತು ಬೂದಿಯಿಂದ ತಿಕ್ಕಿ ಮೈತೊಳೆದರೆ ಮಕ್ಕಳ ಚರ್ಮರೋಗಗಳು ನಾಶವಾಗುತ್ತವೆ.
2) ಗೋಮೂತ್ರದೊಂದಿಗೆ ಹಳೆ ಬೆಲ್ಲ ಮತ್ತು ಅರಿಸಿನಪುಡಿ ಕೂಡಿಸಿ ಕುಡಿದರೆ ಆನೆಕಾಲು, ಕುಷ್ಠರೋಗ ಮೊದಲಾದವು ನಾಶವಾಗುತ್ತವೆ.
3) ಒಂದು ತಿಂಗಳ ಕಾಲ ಗೋಮೂತ್ರದ ಸಂಗಡ ಔಡಲ ಎಣ್ಣೆ ಸೇರಿಸಿ ಕುಡಿದರೆ ಸಂಧಿಪೀಡೆ ಮತ್ತು ವಾತವ್ಯಾಧಿಗಳು ದೂರಾಗುತ್ತವೆ.
4) ಜ್ವರ ಬಂದಾಗ ಗೋಮೂತ್ರಪಾನ ಹಿತಕರವಾಗಿದೆ.

5) ಮಲಬದ್ಧತೆಯಾದಾಗ 3 ತೊಲೆ ಸ್ವಚ್ಛ ಗೋಮೂತ್ರ ( ತಾಜಾ)ವನ್ನು ಸೋಸಿ ಅರ್ಧಮಾಡಿ ಸೈಂಧವಲವಣ ಸೇರಿಸಿ ಕುಡಿದರೆ ಗುಣವಾಗುತ್ತದೆ.

6) ಮೈ, ಕೈ ತುರಿಸುತ್ತಿದ್ದರೆ ಗೋಮೂತ್ರದಲ್ಲಿ ಬೇವಿನ ಎಲೆಗಳನ್ನು ಹಾಕಿ ಮೈ, ಕೈಗೆ ಲೇಪಿಸಿದರೆ ಗುಣವಾಗುತ್ತದೆ.

7) ಕಣ್ಣುಉರಿ, ಮೈಯಲ್ಲಿ ನಿತ್ರಾಣ ಎನಿಸಿದರೆ, ಬಾಯಿರುಚಿ ಇಲ್ಲವಾದರೆ ಗೋ ಮೂತ್ರದಲ್ಲಿ ಬೆಲ್ಲ ಅಥವಾ ಸಕ್ಕರೆ ಕೂಡಿಸಿ ಕುಡಿಯಬೇಕು.

8) ಗೋಮೂತ್ರದಲ್ಲಿ ಕಾರ್ಬೋಲಿಕ್ ಅಸಿಡ್ ಇರುವದರಿಂದ ಅದಕ್ಕೆ ಸ್ವಚ್ಛತೆ ಮತ್ತು ಪವಿತ್ರತೆ ಬಂದಿದೆ. ಇದರಿಂದ ಮಿದುಳಿನ ರೋಗಗಳು ಗುಣವಾಗುತ್ತವೆ ನಿಶ್ಚಿತ. ಗೋಮೂತ್ರದಿಂದ 70ಕ್ಕೂ ಹೆಚ್ಚುರೋಗಗಳನ್ನು ಗುಣಪಡಿಸಬಹುದು. ಎಲ್ಲವನ್ನೂ ಇಲ್ಲಿ ಹೇಳಲಾಗಿಲ್ಲ.

**3)ಗೋಕ್ಷೀರ : (ಹಾಲು)**

ಗೋವಿನ ಹಾಲು ತಕ್ಷಣ ವೀರ್ಯ ಉತ್ಪನ್ನ ಮಾಡುವಗುಣ ಹೊಂದಿದೆ. ಇದು ಬಲವರ್ಧಕವೂ ಆಗಿದೆ. ಹಾಗೆಯೇ ಬುದ್ಧಿವರ್ಧಕವೂ ಆಗಿದೆ. ಈ ಹಾಲಿಗೆ "ಜೀವರಸಾಯನ" ವೆಂದು ಹೆಸರಿದೆ. ಗೋವಿನ ಹಾಲಿನ ಸೇವನೆಯಿಂದ ಶರೀರದಲ್ಲಿ ಸಪ್ತಧಾತುಗಳ ವೃದ್ಧಿಯಾಗುತ್ತದೆ. ವೃದ್ಧಾಪ್ಯ ಬೇಗನೆ ಬರುವುದಿಲ್ಲ. ಈ ಹಾಲಿನಿಂದ ಶರೀರಕ್ಕೆ ಪೋಷಕ ದ್ರವ್ಯಗಳು ಸಿಕ್ಕು ಶರೀರದಲ್ಲಿಯ ಹೊಲಸು ಪದಾರ್ಥಗಳು ಹೊರ ಬೀಳುತ್ತವೆ. ಗೋವಿನ ಹಾಲು ಸೇವಿಸುವದರಿಂದ ರೋಗ ಪ್ರತಿಕಾರಕ ಶಕ್ತಿ ಬೆಳೆಯುತ್ತದೆ. ತಾಯಿಯ ಹಾಲು ಲಭ್ಯವಿಲ್ಲದಿದ್ದಲ್ಲಿ ಗೋವಿನ ಹಾಲನ್ನೇ ಹುಟ್ಟಿದ ಮಗುವಿಗೆ ಕುಡಿಸಲು ಹೇಳುತ್ತಾರೆ. ಇದು ಕೆಮ್ಮು ದಮ್ಮಿನ ಕೆಟ್ಟ ಪರಿಣಾಮಗಳನ್ನು ದೂರಮಾಡುತ್ತದೆ. ಅತಿಹಸಿವೆ, ಅತಿಮೂತ್ರವಿಸರ್ಜನೆ ಮುಂತಾದ ತೊಂದರೆಗಳು ನಿವಾರಣೆಯಾಗುತ್ತವೆ. ಈ ಹಾಲಿನಲ್ಲಿ ಎ ಮತ್ತು ಡಿ ಜೀವನ ಸತ್ವಗಳು ಹೆಚ್ಚು ಇರುತ್ತವೆ.

**4)ಗೋಘೃತ : ( ತುಪ್ಪ )**

ಗೋವಿನ ತುಪ್ಪವನ್ನು ವೇದಗಳಲ್ಲಿ "ಆಯುರ್ವೈಘೃತವಮ್" ಎಂದು ಬಣ್ಣಿಸಲಾಗಿದೆ. ಇದು ಔಷಧಗಳ ಔಷಧ ಎಂದು ಗೌರವಪೂರ್ವಕವಾಗಿ ಕರೆಯಲಾಗಿದೆ. ಈ ತುಪ್ಪದಲ್ಲಿ 2 ಲೆಕ್ಟ್ರೋಜಗಳು ಮತ್ತು 4 ವಾಯುಗಳು ಸಮಾವೇಶಗೊಂಡಿರುತ್ತವೆ. ಯಜ್ಞದಲ್ಲಿ ಗೋ ತುಪ್ಪವನ್ನು ಆಹುತಿ ನೀಡಿದಾಗ ಜ್ವಲನದಲ್ಲಿ ಎಸಿಟಿಲಿನ್ ನಿರ್ಮಾಣವಾಗುತ್ತದೆ. ಇದು ಪ್ರಖರವಾದ ಉಷ್ಣ ಶಕ್ತಿಯಾಗಿದೆ. ಮತ್ತು ದೂಷಿತ ವಾಯುವನ್ನು ಶುದ್ಧಗೊಳಿಸುತ್ತದೆ.

**5) ಗೋದಧಿ : (ಮೊಸರು )**

ಗೋವಿನ ಮೊಸರು ಹಸಿವನ್ನು ಹೆಚ್ಚಿಸುವ ಹಾಗೂ ಹೃದಯಕ್ಕೆ ಬಲವನ್ನು ನೀಡುವ ಪುಷ್ಟಿಕಾರಕವೆನಿಸಿದೆ. ಹೃದಯಕ್ಕೆ ಮಾರಕವಾದ ಕೊಲೆಸ್ಟ್ರಾಲ್‌ನ್ನು ಕಡಿಮೆ ಮಾಡುತ್ತದೆ. ಮೊಸರಿನ ಸೇವನೆಯಿಂದ ಕ್ಯಾನ್ಸರ್ ಚಿಕಿತ್ಸೆಯೂ ಸಾಧ್ಯವಿದೆ.

**6) ಗೋರೋಚನ :**

ಇದು 15 -16 ವರ್ಷ ಮೀರಿದ ಗೋವುಗಳಲ್ಲಿ ನಿರ್ಮಾಣವಾಗುತ್ತದೆ. ಆ ನಂತರ ಪಿತ್ತಾಶಯದಲ್ಲಿ ಪಿತ್ತದ್ರವದ ರೂಪದಲ್ಲಿ ಏಕತ್ರವಾಗಿ ಅವುಗಳ ಕೋಡುಗಳಲ್ಲಿ ಸಂಗ್ರಹವಾಗುತ್ತದೆ. ಗೋವು ಸ್ವಾಭಾವಿಕವಾಗಿ ಸತ್ತನಂತರ ಇದನ್ನು ಪಡೆದರೆ ಅದರಲ್ಲಿ ರೋಗ ನಿರೋಧಕ, ನಿವಾರಕ ಗುಣ ಸಾಕಷ್ಟಿರುತ್ತದೆ. ಆದರೆ ಗೋವಿನ ಹತ್ಯೆ ನಡೆದಾಗ ಭಯದಿಂದಾಗಿ ಮಸ್ತಿಷ್ಕದಲ್ಲಿರುವ ಗೋರೋಚನವು ಕರಗಿ ಹೋಗುತ್ತದೆ. ಅಂದರೆ ಗೋಹತ್ಯೆಯ ಮೂಲಕ ನಾವು ಉತ್ತಮ ಔಷಧಿಯೊಂದನ್ನು ಕಳೆದುಕೊಳ್ಳುತ್ತೇವೆ. ವಿದೇಶಿ ತಳಿಗಳಿಗೆ ಅದನ್ನು ಉತ್ಪಾದಿಸುವ ಸಾಧ್ಯತೆ ಇಲ್ಲ.

ಗೋಜನ್ಯ ಪದಾರ್ಥಗಳ ಸೇವನೆಯ ಪರಿಣಾಮವಾಗಿ ಮನುಷ್ಯನು ಸಾತ್ವಿಕ ಗುಣಗಳನ್ನು ಪಡೆಯುತ್ತಾನೆ. ಗೋವು ಮಾನವನಿಗೆ ಭಗವಂತ ನೀಡಿದ ಒಂದು ಅದ್ಭುತ ಕೊಡುಗೆ ಎಂದು ತಿಳಿಯಬೇಕು.



# ಪಂಚಗವ್ಯ- ಕೃಷಿ ಉಪಯೋಗ

ಮಾನವನ ದೇಹ ಶುದ್ಧೀಕರಣಕ್ಕೆ ಪಂಚಗವ್ಯವು ಅತ್ಯಂತ ಉಪಯುಕ್ತವೆನಿಸಿರುವಂತೆ, ಅದು ಬೆಳೆಗಳ ಆರೋಗ್ಯಕ್ಕೆ ಕೂಡ ಅತೀ ಉಪಯುಕ್ತವಾಗಿದೆ. ವೃಕ್ಷಾಯುರ್ವೇದದಲ್ಲಿ ಇದರ ಕುರಿತು ವಿವರಣೆ ಬಂದಿರುವುದು ಗಮನಾರ್ಹವಾಗಿದೆ.

ಪಂಚಗವ್ಯವು ವೃಕ್ಷಗಳ ಆಂತರಿಕ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಸಸಿಗಳ ಸಾಮರ್ಥ್ಯವನ್ನು ಹೆಚ್ಚಿಸಿ ಬೆಳೆಯ ಗುಣಮಟ್ಟವನ್ನು ಹೆಚ್ಚುಮಾಡುತ್ತದೆ. ಹಾಗೆಯೇ ಹಣ್ಣು, ತರಕಾರಿಗಳ ಗುಣಮಟ್ಟ, ರುಚಿಯನ್ನು ಹೆಚ್ಚಿಸಿ ರೈತರ ಆರ್ಥಿಕ ಮಟ್ಟದ ಮೇಲೆ ಧನಾತ್ಮಕ ಪರಿಣಾಮ ಬೀರುತ್ತದೆ.

ಕೃಷಿ ಸಾಧನೆಯಲ್ಲಿ ಪಂಚಗವ್ಯದ ಬಳಕೆ ಇತ್ತೀಚೆಗೆ ಗಣನೀಯವಾಗಿ ಆಗುತ್ತಿದೆ. ಇದು ಬಳಕೆಯಾಗುತ್ತಿರುವ, ಹೆಚ್ಚು ಪ್ರಚಾರ ಪಡೆಯುತ್ತಿರುವ ಜೀವಾಮೃತ , ಬೀಜಾಮೃತ, ವಿವಿಧ ಸಾವಯುವ ಕೃಷಿಕಷಾಯುಗಳಿಗೂ ಬಳಕೆಯಾಗುತ್ತಿದೆ.

ಋಷಿ ಪರಂಪರೆಯ ಪಂಚಗವ್ಯ ಪದ್ಧತಿಯು ಮಹಾರಾಷ್ಟ್ರದಲ್ಲಿ ಋಷಿಕೃಷಿ ಎಂದೇ ಪ್ರಸಿದ್ಧವಾಗಿದೆ. ಅಲ್ಲಿ ಅದನ್ನು ಬೀಜೋಪಚಾರಕ್ಕೂ ಉಪಯೋಗಿಸುತ್ತಾರೆ. ಹೊಲದಲ್ಲಿ ಬೆಳೆಯುವ ಬೆಳೆಗಳಿಗೆ ಈ ಪಂಚಗವ್ಯ ಕೊಡುವುದರಿಂದ ಬೆಳೆಯ ಇಳುವರಿ ಪ್ರಮಾಣ ಹೆಚ್ಚುವ ಜೊತೆಗೆ ಭೂಮಿಯ ಫಲವತ್ತತೆಯೂ ಹೆಚ್ಚಾಗುತ್ತದೆ.

ಪಂಚಗವ್ಯವನ್ನು ಪೋಷಕ ದ್ರವವಾಗಿ ಪರಿಗಣಿಸಿ ಇದನ್ನು ಬಿಳಿಜೋಳ, ಸೂರ್ಯಕಾಂತಿ, ಕಡಲೆ ಹಾಗೂ ಹಣ್ಣಿನ ಬೆಳೆಗಳಿಗಾಗಿ ಉಪಯೋಗಿಸುತ್ತಾರೆ. ಈ ಬೆಳೆಗಳಿಗೆ ಉಪಯೋಗಿಸುವ ಪಂಚಗವ್ಯದ ಪ್ರಮಾಣ ಬೇರೆ ಬೇರೆಯಾಗಿರುತ್ತದೆ. ಆದರೆ ಇದರ ತಯಾರಿಕೆಯ ವಿಧಾನವು ಬೇರೆಯಾಗಿರುವುದಿಲ್ಲ.

ತಮಿಳುನಾಡಿನಲ್ಲಿ ಭತ್ತ ಬೆಳೆಯುವಲ್ಲಿ "ಪಂಚಗವ್ಯ" ವನ್ನು ಬಳಸುತ್ತಾರೆ. ಪಂಚಗವ್ಯದೊಂದಿಗೆ ಭೂಮಿಗೆ ಶಗಣಿ ಮಿಶ್ರಣವನ್ನು ಕೊಡುವದು ಉತ್ಕೃಷ್ಟ ಸಾವಯವ ಗೊಬ್ಬರವಾಗಿದೆ, ಎಂಬುದಾಗಿ ಕೃಷಿ ತಜ್ಞರು ಹೇಳುತ್ತಾರೆ.

ರಾಸಾಯನಿಕ ಗೊಬ್ಬರಕ್ಕಿಂತ ಈ ಸಾವಯವ ಗೊಬ್ಬರದ ಬಳಕೆ ಅತ್ಯಂತ ಲಾಭದಾಯಕ ಮತ್ತು ಪರಿಣಾಮಕಾರಿಯಾಗಿದೆ. ಇದರಿಂದ ಭೂಮಿಯ ಫಲವತ್ತತೆ ಪೂರ್ಣಗುಣಮಟ್ಟ ತಲುಪಿ, ಬೆಳೆಯ ಸಂಪೂರ್ಣಬೆಳವಣಿಗೆಯಾಗಿ, ಸಮೃದ್ಧ ಇಳುವರಿ ದೊರೆಯುವದು ನಿಶ್ಚಿತ.

ಕರ್ನಾಟಕದಲ್ಲಿ ಕೂಡ ರೈತರು ಈ ಪಂಚಗವ್ಯವನ್ನು ತಮ್ಮ ಕೃಷಿ ಪದ್ಧತಿಯಲ್ಲಿ ಉಪಯೋಗಿಸಿಕೊಂಡು ಸಮೃದ್ಧ ಬೆಳೆಯನ್ನು ಹೊಂದಬೇಕಾಗಿ ಆಶಿಸುತ್ತೇನೆ.



# ಗೋಪ್ರಸವ ಶಾಂತಿ

ದುಷ್ಟಕಾಲದಲ್ಲಿ ಜನನವಾದಾಗ ತಂದೆ, ತಾಯಿ ಮತ್ತು ಬಾಲಕ ಇವರಿಗೆ ಅನಿಷ್ಟವುಂಟಾಗುತ್ತದೆ. ಆ ಪ್ರಸಂಗದಲ್ಲಿ ಗೋಪ್ರಸವ ಶಾಂತಿಯನ್ನು ಮಾಡಬೇಕು.

ಮೂಲಾ, ಆಶ್ಲೇಷಾ, ಜೇಷ್ಠಾ, ಮಘಾ ಇವುಗಳ ನಾಲ್ಕನೇ ಪಾದಾದಿಗಳಲ್ಲಿ ತಂದೆ ಮೊದಲಾದವರಿಗೆ ಅನಿಷ್ಟವನ್ನು ಹೇಳಿರದಿದ್ದರೂ "ಗೋಪ್ರಸವ ಶಾಂತಿ" ಅಗತ್ಯವು.

ಅಶ್ವಿನೀ, ರೇವತಿ, ಪುಷ್ಯ, ಚಿತ್ರಾ ನಕ್ಷತ್ರಗಳಲ್ಲಿ ಜನನವಾದಾಗ ನಕ್ಷತ್ರಶಾಂತಿ ಇಲ್ಲದಿದ್ದರೂ ಗೋಪ್ರಸವಶಾಂತಿಯನ್ನು ಮಾಡಬೇಕು.

ಅಸ್ಯ ಶಿಶೋಃ ಅಮುಕ ದುಷ್ಟಕಾಲೋತ್ಪತ್ತಿಸೂಚಿತ ಅರಿಷ್ಟ ನಿವೃತ್ಯರ್ಥಂ ಗೋಮುಖ ಪ್ರಸವ ಶಾಂತಿಂ ಕರಿಷ್ಯೇ ಎಂಬುದಾಗಿ ಸಂಕಲ್ಪಿಸಿ, ಗಣಪತಿ ಪೂಜೆ ಮಾಡಿ, " ಅಂಗಾದಂಗಾತ್ "[1] ಈ ಮಂತ್ರದಿಂದ ಶಿಶುವಿನ ಶಿರಸ್ಸನ್ನು ಆಘ್ರಾಣಿಸಬೇಕು. ಶಿರಸ್ಸಿನ ಆಘ್ರಾಣದ ನಂತರ "ಅಸ್ಯಗೋಮುಖಪ್ರಸವಸ್ಯ ಪುಣ್ಯಾಹಂ ಭವಂತೋ ಬ್ರುವಂತು", ಹೀಗೆ ಒಂದೇ ವಾಕ್ಯವನ್ನು ಮೂರಾವರ್ತಿ ಹೇಳಬೇಕು.

ಅಗ್ನಿಪ್ರತಿಷ್ಠೆಯ ನಂತರ ಪೀಠದಲ್ಲಿ ಅಧಿಪ್ರತ್ಯಧಿ ದೇವತೆಗಳಿಂದ ಸಹಿತಗಳಾದ ನವಗ್ರಹದೇವತೆಗಳನ್ನು ಸ್ಥಾಪಿಸಿ ಅನ್ವಾಧಾನವನ್ನು ಮಾಡಬೇಕು.

ಆಜ್ಯಭಾಗ ಹೋಮಾಂತದಲ್ಲಿ ಕುಂಭದಲ್ಲಿ ವಿಷ್ಣು, ವರುಣ ಪ್ರತಿಮೆಗಳನ್ನು ಇಟ್ಟು ಪೂಜಿಸಬೇಕು. ನಂತರ ಅನ್ವಾಧಾನದಂತೆ ಹೋಮಿಸಬೇಕು. ಆಚಾರ್ಯನಿಗೆ ಗೋವನ್ನು ದಕ್ಷಿಣೆ ಸಹಿತವಾಗಿ ದಾನ ಕೊಡಬೇಕು.



---

1 ಅಂಗಾದಂಗಾತ್ ಸಂಭವಸಿ ಹೃದಯಾದಧಿಜಾಯಸೇ ।
ಆತ್ಮಾ ವೈ ಪುತ್ರನಾಮಾಸಿ ಸಜೀವ ಶರದಶ್ಶತಮ್ ॥

# ಭಾರತೀಯ ಗೋತಳಿಗಳು

ಭಾರತೀಯ ಗೋತಳಿಗಳು ತಮ್ಮ ಗುಣ ವಿಶೇಷತೆಯಿಂದ ವಿಶ್ವಮಾನ್ಯತೆ ಗಳಿಸಿವೆ ಎಂದರೆ ತಪ್ಪಾಗಲಾರದು. ಪ್ರತಿಯೊಂದು ತಳಿಯಲ್ಲಿ ಅದರದ್ದೇ ಆದ ವಿಶೇಷತೆಗಳಿವೆ. ಇಂಥ ಭಾರತೀಯ ತಳಿಗಳು ನಮ್ಮ ಅಜ್ಞಾನ, ಅಲಕ್ಷ್ಯದಿಂದಾಗಿ ವಿನಾಶದ ಅಂಚಿಗೆ ತಲುಪುತ್ತಿವೆ. ಆಧುನಿಕ ಕಸಾಯಿಖಾನೆಯಿಂದಾಗಿ ನಡೆಯುವ ನಿರಂತರ ಗೋಹತ್ಯೆ ಮತ್ತು ವಿದೇಶೀ ತಳಿಯ ಸಂಕರದಿಂದಾಗಿ ಮೂಲ ತಳಿಗೆ ಸ್ವಲ್ಪ ಧಕ್ಕೆ ತಗಲಿರುವುದಂತೂ ನಿಜ. ಈ ದುರವಸ್ಥೆಯನ್ನು ತಪ್ಪಿಸುವುದುಭಾರತೀಯರ ಆದ್ಯಕರ್ತವ್ಯವೂ ಆಗಿದೆ.

ಒಂದು ಅಂದಾಜಿನ ಪ್ರಕಾರ ಈ ವೇಗದಲ್ಲಿ ಗೋನಾಶವು ಮುಂದುವರೆದರೆ ( ಒಂದು ದಿನಕ್ಕೆ 28,800ಗೋವುಗಳ ಹತ್ಯೆ) 2010ನೆಯ ಇಸವಿಯಲ್ಲಿ ಗೋತಳಿಗಳು ಸಂಪೂರ್ಣನಾಶವಾಗಬಹುದು ಎಂಬುದಾಗಿ ಭಾರತ ಸರಕಾರದ ಪಶುಕಲ್ಯಾಣ ಕೇಂದ್ರ ಕಚೇರಿ, ದೆಹಲಿ ಅಭಿಪ್ರಾಯ ವ್ಯಕ್ತಪಡಿಸಿದೆ.

ಗೋ ಆಧಾರಿತ ಕೃಷಿಯಿಂದ ಸಮೃದ್ಧವಾದ ಬೆಳೆ ಬೆಳೆಯುವುದನ್ನು ಗಮನಿಸಿದ ಬ್ರಿಟಿಶರು ಈ ದೇಶವನ್ನು ದುರ್ಬಲಗೊಳಿಸಲು ಕೃಷಿ ಆಧಾರವಾದ ಗೋವನ್ನೇ ನಾಶಮಾಡುವ ಯೋಜನೆ ಕೈಕೊಂಡು ಕಸಾಯಿಖಾನೆಗಳನ್ನು ತೆರೆದರು. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದಲ್ಲಿ 350 ಕಸಾಯಿಖಾನೆಗಳಿದ್ದರೆ ಈಗ ಒಟ್ಟು 36 ಸಾವಿರ ಕಸಾಯಿ ಖಾನೆಗಳಿವೆ.

ಗೋತಳಿಗಳನ್ನು ಸಂರಕ್ಷಿಸಲು ಭಾರತೀಯರು ಟೊಂಕಕಟ್ಟಿ ನಿಂತು ಕಸಾಯಿಖಾನೆಗಳನ್ನು ಮುಚ್ಚಿಸಲು ಚಳವಳಿಯನ್ನೇ ಆರಂಭಿಸಬೇಕು. ಆಗ ಮಾತ್ರ ಭಾರತೀಯ ಗೋತಳಿಗಳು ಅಸ್ತಿತ್ವದಲ್ಲಿ ಇರಲು ಸಾಧ್ಯವಾಗುತ್ತದೆ.

## ಭಾರತೀಯ ಗೋತಳಿಗಳ ಹೆಸರು ಇಂತಿವೆ.

1)ಮಲೆನಾಡುಗಿಡ್ಡ. 2) ಅಮೃತ ಮಹಲ್ 3) ಹಳ್ಳಿಕಾರು 4) ಖಿಲಾರಿ 5) ಜವಾರಿ 6) ಕೃಷ್ಣವ್ಯಾಲಿ 7) ದೇವನಿ 8) ಕಂಗಾಯಂ 9) ಅಂಬ್ಲಾಚೆರಿ 10) ಬರಗೂರು 11) ಓಂಗೋಲ್ 12) ವೆಚೂರು 13) ಡಾಂಗಿ 14) ಗೌಳವ್ 15) ಗೀರ 16) ರಾಟಿ 17) ಥಾರಪಾರ್ಕರ 18) ಹರ್ಯಾನ 19) ಸಾಹಿವಾಲ್ 20) ಕಾಂಕ್ರೆಜ 21) ಮಾಳ್ವಿ 22) ನಾಗೋರ್ 23)ಪುಂಗನೂರ್ 24) ಬಚೌರ್ 25) ಕೇಂಕಾಥ 26) ನಿಮಾರಿ 27) ಪೋನ್ವಾರ್ 28) ಸಿರಿ 29) ರೆಡ್‌ಸಿಂಧಿ 30) ಮೇವಾಡ್ 31) ಮೇವಾಟಿ.

ಒಟ್ಟು 70ಕ್ಕೂ ಹೆಚ್ಚು ಗೋತಳಿಗಳು ಇದ್ದವೆಂದು ತಿಳಿದುಬರುತ್ತದೆ. ಅವುಗಳಲ್ಲಿ ಈಗ 31 ತಳಿಗಳು ಮಾತ್ರ ಇವೆ ಎಂಬುದು ಶೋಚನೀಯ ಮಾತೇ ಸರಿ. ಇನ್ನಾದರೂ ಈ ಕಡೆ ಲಕ್ಷ್ಯಕೊಟ್ಟರೆ ಇವುಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ.

ಭಾರತೀಯ ಗೋತಳಿಗಳು ತಮ್ಮದೇ ಆದ ವೈಶಿಷ್ಟ್ಯದಿಂದ ಕೂಡಿವೆ ಎಂಬುದನ್ನು ಮೇಲೆ ತಿಳಿಸಲಾಗಿದೆ. ಇದರ ಕುರಿತು ಒಂದೆರಡು ಮಾತು ಇಲ್ಲಿ ಹೇಳಬೇಕು.

ಭಾರತೀಯ ಗೋವುಗಳ ಹಾಲಿನಲ್ಲಿ ಕೊಲೆಸ್ಟ್ರಾಲ್ ಅಂಶ ಕಡಿಮೆ ಇದ್ದು, ಮನುಷ್ಯನಿಗೆ ಬೇಕಾದ ಜೀವಸತ್ವಗಳನ್ನು ಹೊಂದಿರುತ್ತದೆ. ಗೋಮೂತ್ರಸೇವನೆ ಕ್ಯಾನ್ಸರ್ ಮೊದಲಾದ ರೋಗ ನಿವಾರಕವಾಗಿದೆ. ಇವುಗಳ ಸಾಕಣಿಕೆ ಸುಲಭವಾಗಿದೆ. ಈ ಗೋವುಗಳಿಗೆ ಬಿಸಿಲ ಬೇಗೆಯನ್ನು ತಡೆದುಕೊಳ್ಳಲು ಸಹಜಶಕ್ತಿ ಇದೆ. ಇವುಗಳಲ್ಲಿ ರೋಗ ನಿರೋಧಕ ಶಕ್ತಿ ಅದ್ಭುತವಾಗಿದೆ. ಇವುಗಳಿಗೆ ಕಡಿಮೆ ಗುಣಮಟ್ಟದ ಆಹಾರ ಸಾಕಾಗುತ್ತದೆ. ಆಯುರ್ವೇದದಲ್ಲಿ ಈ ಗೋವುಗಳ ಹಾಲಿನ ಆರೋಗ್ಯಕಾರಕ ಗುಣಗಳನ್ನು ಅನೇಕ ಕಡೆಯಲ್ಲಿ ಉಲ್ಲೇಖಿಸಲಾಗಿದೆ.

ವಿದೇಶಿ ತಳಿಯ ಗೋವುಗಳ ಹಾಲನ್ನು ಕುಡಿದು ಜನರು ಅನೇಕ ರೋಗಗಳಿಗೆ ತುತ್ತಾಗುತ್ತಿದ್ದಾರೆ ಎಂಬ ಪತ್ರಿಕಾ ಹೇಳಿಕೆಯನ್ನು ಗಮನಿಸಿದರೆ, ನಮ್ಮ ಭಾರತೀಯ ಗೋತಳಿಗಳ ವೈಶಿಷ್ಟ್ಯವೇನೆಂಬುದು ಮನವರಿಕೆಯಾಗದಿರದು.



# ಅನುಬಂಧ-1

## ॥ ಗೋಸಾವಿತ್ರೀ ಸ್ತೋತ್ರಮ್ ॥

ನಾರಾಯಣಂ ನಮಸ್ಕೃತ್ಯ ದೇವೀಂ ತ್ರಿಭುವನೇಶ್ವರೀಮ್ ।
ಗೋಸಾವಿತ್ರೀಮ್ ಪ್ರವಕ್ಷ್ಯಾಮಿ ವ್ಯಾಸೇನೋಕ್ತಾಂ ಸನಾತನೀಮ್ ॥ 1

ಯಸ್ಯ ಶ್ರವಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ।
ಗವಾಂ ನಿಶ್ವಸಿತಂ ವೇದಾಃ ಸಷಡಂಗಪದಕ್ರಮಾಃ ॥ 2

ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೌತಿಷಂ ತಥಾ ।
ಏತಾಸಾಮಗ್ರಶೃಂಗೇಷು ಇಂದ್ರವಿಷ್ಣೂ ಸ್ವಯಂ ಸ್ಥಿತೌ ॥ 3

ಶಿರೋ ಬ್ರಹ್ಮಾ ಗುರುಃ ಸ್ಕಂಧೇ ಲಲಾಟೇ ವೃಷಭಧ್ವಜಃ ।
ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿಭಾಸ್ಕರೌ ॥ 4

ದಂತೇಷು ಮರುತೋ ದೇವಾ ಜಿಹ್ವಾಯಾಂ ಚ ಸರಸ್ವತೀ ।
ಕಂಠೇ ಚ ವರುಣೋ ದೇವೋ ಹೃದಯೇ ಹವ್ಯವಾಹನಃ ॥ 5

ಉದರೇ ಪೃಥಿವೀ ದೇವಿ ಸಶೈಲವನಕಾನನಾ ।
ಕಕುದಿ ದ್ಯೌಃ ಸನಕ್ಷತ್ರಾ ಪೃಷ್ಠೇ ವೈವಸ್ವತೋಯಮಃ ॥ 6

ಊರ್ವೋಸ್ತು ವಸವೋದೇವಾ ವಾಯುರ್ಜಂಘೇ ಸಮಾಶ್ರಿತಃ ।
ಆದಿತ್ಯಸ್ತ್ವಾಶ್ರಿತೋವಾಲೇ ಸಾಧ್ಯಾಃ ಸರ್ವಾಂಗ ಸಂಧಿಷು ॥ 7

ಅಪಾನೇ ಸರ್ವತೀರ್ಥಾನಿ ಗೋಮೂತ್ರೇ ಜಾಹ್ನವೀಸ್ವಯಮ್ ।
ಧೃತಿಃ ಪುಷ್ಟಿರ್ಮಹಾಲಕ್ಷ್ಮೀ ಗೋಮಯೇ ಸಂಸ್ಥಿತಾ ಸದಾ ॥ 8

ನಾಸಿಕಾಯಾಂ ಚಶ್ರೀದೇವಿ ಜ್ಯೇಷ್ಠಾ ವಸತಿ ಭಾಮಿನೀ ।
ಚತ್ವಾರಃ ಸಾಗರಾಃ ಪೂರ್ಣಾ ಗವಾಂ ಹ್ಯೇವ ಪಯೋಧರೇ ॥ 9

ಖುರಮಧ್ಯೇಷು ಗಂಧರ್ವಾಃ ಖುರಾಗ್ರೇ ಪನ್ನಗಾಃ ಶ್ರಿತಾಃ ।
ಖುರಾಣಾಂ ಪಶ್ಚಿಮೇ ಭಾಗೇ ಹ್ಯಪ್ಸರಾಣಾಂ ಗಣಾಃ ಸ್ಮೃತಾಃ ॥ 10

ಶ್ರೋಣೀ ತಟೇಷು ಪಿತರೋ ರೋಮಲಾಂಗೂಲಮಾಶ್ರಿತಾಃ ।
ಋಷಯೋ ರೋಮಕೂಪೇಷು ಚರ್ಮಣ್ಯೇವ ಪ್ರಜಾಪತಿಃ ॥ 11

ಹುಂಕಾರೇ ಚತುರೋ ವೇದಾಃ ಹುಂಶಬ್ದೇ ಚ ಪ್ರಜಾಪತಿಃ ।
ಏವಂ ವಿಷ್ಣುಮಯಂ ಗಾತ್ರಂ ತಾಸಾಂ ಗೋಪ್ತಾ ಸಕೇಶವಃ ॥ 12

ಗವಾಂ ದೃಷ್ಟ್ವಾ ನಮಸ್ಕೃತ್ಯ ಕೃತ್ವಾ ಚೈವ ಪ್ರದಕ್ಷಿಣಮ್ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ 13

ಕಾಮದೋಗ್ಧ್ರೀ ಸ್ವಯಂ ಕಾಮದೋಗ್ಧ್ರಾ ಸನ್ನಿಹಿತಾ ಮತಾ ।
ಗೋಗ್ರಾಸಸ್ಯ ವಿಶೇಷೋಽಸ್ತಿ ಹಸ್ತಸಂಪೂರ್ಣ ಮಾತ್ರತಃ ॥ 14

ಶತಬ್ರಾಹ್ಮಣ ಭುಕ್ತೇನ ಸಮಮಾಹುರ್ಯುಧಿಷ್ಠಿರ ।
ಯ ಇದಂ ಪಠತೇ ನಿತ್ಯಂ ಶೃಣುಯಾದ್ವಾ ಸಮಾಹಿತಃ ॥ 15

ಬ್ರಾಹ್ಮಣೋ ಲಭತೇ ವಿದ್ಯಾಂ ಕ್ಷತ್ರಿಯೋ ರಾಜ್ಯಮಶ್ನುತೇ ।
ವೈಶ್ಯೋ ಧನಸಮೃದ್ಧಃ ಸ್ಯಾಚ್ಛೂದ್ರಃ ಪಾಪಾತ್ ಪ್ರಮುಚ್ಯತೇ ॥ 16

ಗರ್ಭಿಣೀ ಜನಯೇತ್ ಪುತ್ರಂ ಕನ್ಯಾ ಭರ್ತಾರಮಾಪ್ನುಯಾತ್ ।
ಸಾಯಂ ಪ್ರಾತಸ್ತು ಪಠತಾಂ ಶಾಂತಿಸ್ವಸ್ತ್ಯಯನಂ ಮಹತ್ ॥ 17

ಅಹೋರಾತ್ರಿಕೃತೈಃ ಪಾಪೈಸ್ತತ್ಕ್ಷಣಾತ್ ಪರಿಮುಚ್ಯತೇ ।
ಫಲಂ ತು ಗೋಸಹಸ್ರಸ್ಯ ಇತ್ಯುಕ್ತಂ ಹಿ ಬ್ರಹ್ಮಣಾ ಪುರಃ ॥ 18

ಗಾವೋ ಮೇ ಹ್ಯಗ್ರತಃ ಸಂತು ಗಾವೋಮೇಸಂತು ಪೃಷ್ಠತಃ ।
ಗಾವೋಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥ 19

ಸುರಭೀ ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದೇ ಸ್ಥಿತಾ ।
ಗೋಗ್ರಾಸಂ ತು ಮಯಾದತ್ತಂ ಸುರಭಿಃ ಪ್ರತಿಗೃಹ್ಯತಾಂ ॥ 20

ಗಾವೋ ಮೇ ಮಾತರಃ ಸರ್ವಾಃ ಸರ್ವೇ ಮೇ ಪಿತರೋವೃಷಾಃ ।
ಗ್ರಾಸಮುಷ್ಟಿಂ ಮಯಾದತ್ತಂ ಸುರಭಿಃ ಪ್ರತಿಗೃಹ್ಯತಾಮ್ ॥ 21

ಫಲಾನಾಂ ಗೋ ಸಹಸ್ರಸ್ಯ ಪ್ರದದ್ಯಾತ್ ಬ್ರಾಹ್ಮಣೋತ್ತಮೇ ।
ಸರ್ವತೀರ್ಥಾಧಿಕಂ ಪುಣ್ಯಮಿತ್ಯುಕ್ತಂ ಬ್ರಹ್ಮಣಾಪುರಾ ॥ 22

॥ ಇತಿ ಶ್ರೀ ಮನ್ಮಹಾಭಾರತೇ ಭೀಷ್ಮಯುಧಿಷ್ಠಿರ ಸಂವಾದೇ
ಗೋಸಾವಿತ್ರೀ ಸ್ತೋತ್ರಮ್ ಸಂಪೂರ್ಣಂ ॥



# ಗೋವಂದನಮ್

ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯಿಭ್ಯ ಏವಚ ।
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥ 1

ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾಚ್ಛಿವಂ ಮೇಸ್ಯಾದಿಹ ಲೋಕೇ ಪರತ್ರಚ ॥ 2

ಆಗಚ್ಛ ದೇವಿ ಕಲ್ಯಾಣೀ ಶುಭಾಂ ಪೂಜಾಂ ಗೃಹಾಣ ಮೇ ।
ವತ್ಸೇನ ಸಹಿತಾಂ ತ್ವಾಹಂ ದೇವೀಮಾವಾಹಯಾಮ್ಯಹಮ್ ॥ 3

ದೇಹಸ್ಥಿತಾಸಿ ರುದ್ರಾಣಿ ಶಂಕರಸ್ಯ ಸದಾಪ್ರಿಯಾ ।
ಧೇನುರೂಪೇಣ ಸಾ ದೇವೀ ಮಮಪಾಪಂ ವ್ಯಪೋಹತು ॥ 4

ಯಾಲಕ್ಷ್ಮೀಃ ಸರ್ವಲೋಕೇಷು ಯಾಚ ದೇವೇಷ್ವವಸ್ಥಿತಾ ।
ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥ 5

ಪಂಚಗಾವಃ ಸಮುತ್ಪನ್ನಾಃ ಮಥ್ಯಮಾನೇ ಮಹೋದಧೌ ।
ತಾಸಾಂ ಮಧ್ಯೇತು ಯಾನಂದಾ ತಸ್ಯೈ ದೇವ್ಯೈ ನಮೋ ನಮಃ ॥ 6

ಸರ್ವಕಾಮದುಘೇ ದೇವೀ ಸರ್ವ ತೀರ್ಥಾಭಿಷೇಚಿನೀ ।
ಪಾವನಿ ಸುರಭಿ ಶ್ರೇಷ್ಠೇ ದೇವಿ ತುಭ್ಯಂ ನಮೋ ನಮಃ ॥ 7

ಗವಾಂದೃಷ್ಟ್ವಾ ನಮಸ್ಕೃತ್ಯ ಕುರ್ಯಾಚ್ಚೈವ ಪ್ರದಕ್ಷಿಣಮ್ ।
ಪ್ರದಕ್ಷಿಣೀ ಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ 8

ಮಾತರಃ ಸರ್ವಭೂತಾನಾಂ ಗಾವಃ ಸರ್ವಸುಖಪ್ರದಾಃ ।
ಬುದ್ಧಿಮಾಕಾಂಕ್ಷತಾ ನಿತ್ಯಂ ಗಾವಃ ಕಾರ್ಯಾಃ ಪ್ರದಕ್ಷಿಣಾಃ ॥ 9

ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವಚ ।
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥ 10

ಗಾವೋ ಮಮಾಗತಃ ಸಾತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ನಿತ್ಯಂ ಗವಾಂ ಮಧ್ಯೇ ವಸಾಮ್ಯಹಮ್ ॥ 11

ಸರ್ವದೇವಮಯೇದೇವಿ ಸರ್ವದೇವೈರಲಂಕೃತೇ ।
ಮಾತರ್ಮಮಾಭಿಲಷಿತಂ ಸಫಲಂ ಕುರು ನಂದಿನೀ ॥ 12

ಕ್ಷೀರೋದಾರ್ಣವ ಸಂಭೂತೇ ಸುರಾಸುರ ನಮಸ್ಕೃತೇ ।
ಸರ್ವದೇವಮಯೇ ಮಾತರ್ಗೃಹಾಣಾರ್ಘ್ಯಂ ನಮೋಽಸ್ತುತೇ ॥ 13

ಸರ್ವದೇವಮಯೇ ದೇವೀ ಸರ್ವತೀರ್ಥಮಯೇ ಶುಭೇ ।
ಗೃಹಾಣಾರ್ಘ್ಯಂ ಮಯಾದತ್ತಂ ಸೌರಭೇಯ ನಮೋಽಸ್ತುತೇ ॥ 14



# ವೇದೇ ಗೋಸ್ತವನಮ್

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮಮೃತಸ್ಯ ನಾಭಿಃ ।
ಪ್ರನುವೋಚಂ ಚಿಕಿತುಷೇ ಜನಾಯ ಮಾ ಗಾಮನಾಗಾಮದಿತಿಂ ವಧಿಷ್ಟ ॥
ಆ ಗಾವೋ ಅಗ್ಮನ್ನುತ ಭದ್ರಮಕ್ರನ್ತ್ಸೀದಂತು ಗೋಷ್ಠೇರಣಯನ್ ತ್ವಸ್ಮೇ ।
ಪ್ರಜಾವತೀಃ ಪುರುರೂಪಾ ಇಹ ಸ್ಯುರಿಂದ್ರಾಯ ಪೂರ್ವೀರುಪಸೋದುಹಾನಾಃ ॥
ನ ತಾ ನಶಂತಿ ನ ದಭಾತಿ ತಸ್ಕರೋ ನಾಸಾಮಾ ಮಿತ್ರೋ ವ್ಯಥಿರಾ ದಧರ್ಷತಿ ॥
ದೇವಾಂಶ್ಚಯಾಭಿರ್ಯಜತೆ ದದಾತಿ ಚ ಜ್ಯೋಗಿತ್ತಾಭಿಃ ಸಚತೆ ಗೋಪತಿಃ ಸಹ ।
ಗಾವೋ ಭಗೋ ಗಾವ ಇಂದ್ರೋ ಮ ಇಚ್ಛಾದ್ಗಾವಃ ಸೋಮಸ್ಯ ಪ್ರಥಮಸ್ಯಭಕ್ಷಃ ।
ಇಮಾ ಯಾ ಗಾವಃ ಸಜನಾಸ ಇಂದ್ರ ಇಚ್ಛಾಮಿ ಹೃದಾ ಮನಸಾ ಚಿದಿಂದ್ರಮ್ ॥
ಯೂಯಂ ಗಾವೋ ಮೇದಯಥಾ ಕೃಶಂ ಚಿದಶ್ರೀರಂ ಚಿತ್ ಕೃಣುಥಾ ಸುಪ್ರತೀಕಮ್ ।
ಭದ್ರಂ ಗೃಹಂ ಕೃಣುಥ ಭದ್ರವಾಚೋ ಬೃಹದ್ವೋ ವಯ ಉಚ್ಯತೇ ಸಭಾಸು ॥
ಪ್ರಜಾಪತೀಃ ಸೂಯವಸೇ ರುಶಂತೀಃ ಶುದ್ಧಾ ಅಪಃ ಸುಪ್ರಪಾಣೇ ಪಿಬಂತೀ ।
ಮಾ ವಸ್ತೇನ ಈಶತ ಮಾಘಶಂಸಃ ಪರಿ ವೋ ರುದ್ರಸ್ಯ ಹೇತಿ ವೃಣಕ್ತು ॥
ಹಿಂಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾಗಾತ್ ।
ದುಹಾಮಶ್ವಿಭ್ಯಾಂ ಪಯೋ ಅಘ್ನೇಯಂ ಸಾ ವರ್ಧತಾಂ ಮಹತೇ ಸೌಭಗಾಯ ॥



# ಗವೋಪನಿಷತ್

ತ್ರೈಲೋಕ್ಯೇ ಭಗವನ್ ಕಿಂಸ್ವಿತ್ ಪವಿತ್ರಂ ಕಥ್ಯತೇಽನಘ ।
ಯತ್ ಕೀರ್ತಯನ್ ಸದಾ ಮರ್ತ್ಯಃ ಪ್ರಾಪ್ನುಯಾತ್ ಪುಣ್ಯಮುತ್ತಮಮ್ ॥ 1

ಗಾವಃ ಸುರಭಿಗಂಧಿನ್ಯಸ್ತಥಾ ಗುಗ್ಗುಲಗಂಧಯಃ ।
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಮಹತ್ ॥ 2

ಗಾವೋ ಭೂತಂ ಚ ಭವ್ಯಂಚ ಗಾವಃ ಪುಷ್ಟಿಃ ಸನಾತನೀ ।
ಗಾವೋ ಲಕ್ಷ್ಮ್ಯಾಸ್ತಥಾ ಮೂಲಂ ಗೋಷು ದತ್ತಂ ನ ನಶ್ಯತೀ ॥ 3

ಅನ್ನಂ ಹಿ ಪರಮಂ ಗಾವೋ ದೇವಾನಾಂ ಪರಮಂ ಹವಿಃ ।
ಸ್ವಾಹಾಕಾರ ವಷಟ್‌ಕಾರೌ ಗೋಷು ನಿತ್ಯಂ ಪ್ರತಿಷ್ಠಿತೌ ॥ 4

ಗಾವೋ ಯಜ್ಞಸ್ಯ ಹಿ ಫಲಂ ಗೋಷು ಯಜ್ಞಾಃ ಪ್ರತಿಷ್ಠಿತಾಃ
ಗಾವೋ ಭವಿಷ್ಯಂ ಭೂತಂ ಚ ಗೋಷು ಯಜ್ಞಾಃ ಪ್ರತಿಷ್ಠಿತಾಃ ॥ 5

ಸಾಯಂ ಪ್ರಾತಶ್ಚ ಸತತಂ ಹೋಮಕಾಲೇ ಮಹಾದ್ಯುತೇ ।
ಗಾವೋ ದದತಿ ವೈ ಹೌಮ್ಯಮೃಷಿಭ್ಯಃ ಪುರುಷರ್ಷಭಃ ॥ 6

ಯಾನಿ ಕಾನಿ ಚ ದುರ್ಗಾಣಿ ದುಷ್ಕೃತಾನಿ ಕೃತಾನಿ ಚ ।
ತರಂತಿ ಚೈವ ಪಾಪ್ಮಾನಂ ಧೇನುಂ ಯೇ ದದತಿ ಪ್ರಭೋ ॥ 4

ಏಕಾಂ ಚ ದಶಗುರ್ದದ್ಯಾತ್ ದಶ ದದ್ಯಾಚ್ಚ ಗೋಶತೀ ।
ಶತಂ ಸಹಸ್ರಗುರ್ದದ್ಯಾತ್ ಸರ್ವೇ ತುಲ್ಯಫಲಾ ಹಿ ತೇ ॥ 8

ಅನಾಹಿತಾಗ್ನಿಃ ಶತಗುರಯಜ್ವಾ ಚ ಸಹಸ್ರಗುಃ ।
ಸಮೃದ್ಧೋ ಯಶ್ಚ ಕೀನಾಶೋ ನಾರ್ಘ್ಯಮರ್ಹಂತಿ ತೇ ತ್ರಯಃ ॥ 9

ಕಪಿಲಾಂ ಯೇ ಪ್ರಯಚ್ಛಂತಿ ಸವತ್ಸಾಂ ಕಾಂಶ್ಯದೋಹನಾಮ್ ।
ಸುಪ್ರತಾಂ ವಸ್ತ್ರಸಂವೀತಾಮುಭೌ ಲೋಕೌ ಜಯಂತಿ ತೇ ॥ 10

ಯುವಾನಮಿಂದ್ರಯೋಪೇತಂ ಶತೇನ ಶತಯೂಥಪಮ್ ।
ಗವೇಂದ್ರ ಬ್ರಾಹ್ಮಣೇಂದ್ರಾಯ ಭೂರಿಶೃಂಗಮಲಂಕೃತಮ್ ॥ 11

ವೃಷಭಂ ಯೇ ಪ್ರಯಚ್ಛಂತಿ ಶ್ರೋತ್ರಿಯಾಯ ಪರಂತಪ ।
ಐಶ್ವರ್ಯಂ ತೇಽಧಿಗಚ್ಛಂತಿ ಜಾಯಮಾನಾಃ ಪುನಃ ಪುನಃ ॥ 12

ನಾಕೀರ್ತಯಿತ್ವಾ ಗಾಃ ಸುಪ್ಯಾತ್ ತಾಸಾಂ ಸಂಸ್ಮೃತ್ಯ ಚೋತ್ಪತೇತ್ ।
ಸಾಯಂ ಪ್ರಾತರ್ನಮಸ್ಯೇಚ್ಚ ಗಾಸ್ತತಃ ಪುಷ್ಟಿಮಾಪ್ನುಯಾತ್ ॥ 13

ಗವಾಂ ಮೂತ್ರ ಪುರೀಷಸ್ಯ ನೋದ್ವಿಜೇತ ಕಥಂಚನ ।
ನ ಚಾಸಾಂ ಮಾಂಸ ಮಶ್ನೀಯಾತ್ ಗವಾಂ ಪುಷ್ಟಿಂ ತಥಾಪ್ನುಯಾತ್ ॥ 14

ಗಾಶ್ಚ ಸಂಕೀರ್ತಯೇನ್ನಿತ್ಯಂ ನಾವಮನ್ಯೇತ ತಾಸ್ತಥಾ ।
ಅನಿಷ್ಟಂ ಸ್ವಪ್ನಮಾಲಕ್ಷ್ಯ ಗಾಂ ನರಃ ಸಂಪ್ರಕೀರ್ತಯೇತ್ ॥ 15

ಗೋಮಯೇನ ಸದಾ ಸ್ನಾಯಾತ್ ಕರೀಷೇ ಚಾಪಿ ಸಂವಿಶೇತ್ ।
ಶ್ಲೇಷ್ಮ ಮೂತ್ರ ಪುರೀಷಾಣಿ ಪ್ರತಿಘಾತಂ ಚ ವರ್ಜಯೇತ್ ॥ 16

ಘೃತೇನ ಜುಹುಯಾದಗ್ನಿಂ ಘೃತೇನ ಸ್ವಸ್ತಿ ವಾಚಯೇತ್ ।
ಘೃತಂ ದದ್ಯಾತ್ ಘೃತಂ ಪ್ರಾಶ್ಯೇತ್ ಗವಾಂ ಪುಷ್ಟಿಂ ಸದಾಶ್ನುತೇ ॥ 17

ಗೋಮತ್ಯಾ ವಿದ್ಯಯಾ ಧೇನುಂ ತಿಲಾನಾಮಭಿಮಂತ್ರ್ಯಯಃ ।
ಸರ್ವರತ್ನಮಯೀಂ ದದ್ಯಾನ್ನ ಸ ಶೋಚೇತ್ ಕೃತಾ ಕೃತೇ ॥ 18

ಗಾವೋ ಮಾಮುಪತಿಷ್ಠಂತು ಹೇಮಶೃಂಗಃ ಪಯೋಮುಚಃ ।
ಸುರಭ್ಯಃ ಸೌರಭೇಯ್ಯಶ್ಚ ಸರಿತಃ ಸಾಗರಂ ಯಥಾ ॥ 19

ಗಾ ವೈ ಪಶ್ಯಾಮ್ಯಹಂ ನಿತ್ಯಂ ಗಾವಃ ಪಶ್ಯಂತು ಮಾಂ ಸದಾ ।
ಗಾವೋಽಸ್ಮಾಕಂ ವಯಂ ತಾಸಾಂ ಯತೋ ಗಾವಸ್ತತೋವಯಮ್ ॥ 20

ಏವಂ ರಾತ್ರೌ ದಿವಾ ಚಾಪಿ ಸಮೇಷು ವಿಷಮೇಷು ಚ ।
ಮಹಾಭಯೇಷು ಚ ನರಃ ಕೀರ್ತಯನ್ ಮುಚ್ಯತೇ ಭಯಾತ್ ॥ 21



# ಶ್ರೀವಿಷ್ಣುಧರ್ಮೋತ್ತರ ಪುರಾಣೇ ಗೋಮತೀ ವಿದ್ಯಾ

ಗೋಮತೀಂ ಕೀರ್ತಯಿಷ್ಯಾಮಿ ಸರ್ವಪಾಪ ಪ್ರಣಾಶಿನೀಮ್ ।
ತಾಂ ತು ಮೇ ವದತೋ ವಿಪ್ರ ಶೃಣುಷ್ವ ಸುಸಮಾಹಿತಃ ॥ 1
ಗಾವಃ ಸುರಭಯೋ ನಿತ್ಯಂ ಗಾವೋ ಗುಗ್ಗುಲಗಂಧಿಕಾಃ ।
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಪರಮ್ ॥ 2
ಅನ್ನಮೇವ ಪರಂ ಗಾವೋ ದೇವಾನಾಂ ಹವಿರುತ್ತಮಮ್ ।
ಪಾವನಂ ಸರ್ವಭೂತಾನಾಂ ರಕ್ಷಂತಿ ಚ ವಹಂತಿ ಚ ॥ 3
ಹವಿಷಾ ಮಂತ್ರಪೂತೇನ ತರ್ಪಯಂತ್ಯಮರಾನ್ ದಿವಿ ।
ಋಷೀನಾಮಗ್ನಿಹೋತ್ರೇಷು ಗಾವೋ ಹೋಮೇ ಪ್ರಯೋಜಿತಾಃ ॥ 4
ಸರ್ವೇಷಾಮೇವ ಭೂತಾನಾಂ ಗಾವಃ ಶರಣಮುತ್ತಮಮ್ ।
ಗಾವಃ ಪವಿತ್ರಂ ಪರಮಂ ಗಾವೋ ಮಂಗಲಮುತ್ತಮಮ್ ॥ 5
ಗಾವಃ ಸ್ವರ್ಗಸ್ಯ ಸೋಪಾನಂ ಗಾವೋ ಧನ್ಯಾಃ ಸನಾತನಾಃ ।
ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವಚ ॥ 6
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ।
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಸ್ಥಿತಮ್ ॥ 7
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ತಿಷ್ಠತಿ ।
ದೇವ ಬ್ರಾಹ್ಮಣ ಗೋಸಾಧುಸಾಧ್ವೀಭಿಃ ಸಕಲಂ ಜಗತ್ ॥ 8
ಧಾರ್ಯತೇ ವೈ ಸದಾ ತಸ್ಮಾತ್ ಸರ್ವೇ ಪೂಜ್ಯತಮಾಃ ಸದಾ ।
ಯತ್ರ ತೀರ್ಥೇ ಸದಾ ಗಾವಃ ಪಿಬಂತಿ ತೃಷಿತಾ ಜಲಮ್ ॥ 9
ಗವಾಂ ಹಿ ತೀರ್ಥೇ ವಸತೀಹ ಗಂಗಾ ಪುಷ್ಟಿಸ್ತಥಾ ತದ್ರಜಸಿ ಪ್ರವೃದ್ಧಾ ।
ಲಕ್ಷ್ಮೀಃ ಕರೀಷೇ ಪ್ರಣತೌ ಚ ಧರ್ಮಸ್ತಾಸಾಂ ಪ್ರಣಾಮಂ ಸತತಂ ಚ ಕುರ್ಯಾತ್॥

॥ ಇತಿ ಶ್ರೀ ವಿಷ್ಣುಧರ್ಮೋತ್ತರ ಪುರಾಣೇ ಗೋಮತೀ ವಿದ್ಯಾ ಸಮಾಪ್ತಮ್ ॥



# ಶ್ರೀ ಭವಿಷ್ಯಪುರಾಣೇ ಗೋಸ್ತೋತ್ರಮ್

ಕ್ಷೀರೋದತೋಯಸಂಭೂತಾ ಯಾಃ ಪುರಾಮೃತಮಂಥನೇ ।
ಪಂಚಗಾವಃ ಶುಭಾಃ ಪಾರ್ಥ ಪಂಚಲೋಕಸ್ಯಮಾತರಃ ॥ 1

ನಂದಾ ಸುಭದ್ರಾ ಸುರಭಿಃ ಸುಶೀಲಾ ಬಹುಲಾ ಇತಿ ।
ಏತಾ ಲೋಕೋಪಕಾರಾಯ ದೇವಾನಾಂ ತರ್ಪಣಾಯ ಚ ॥ 2

ಜಮದಗ್ನಿ ಭರದ್ವಾಜ ವಸಿಷ್ಠಾಸಿತ ಗೌತಮಃ ।
ಜಗೃಹುಃ ಕಾಮದಾಃ ಪಂಚ ಗಾವೋ ದತ್ತಾಃ ಸುರೈಸ್ತತಃ ॥ 3

ಗೋಮಯಂ ರೋಚನಾ ಮೂತ್ರಂ ಕ್ಷೀರಂ ದಧಿ ಘೃತಂ ಗವಾಮ್ ।
ಷಡಂಗಾನಿ ಪವಿತ್ರಾಣಿ ಸಂಶುದ್ಧಿಕರಣಾನಿ ಚ ॥ 4

ಗೋಮಯಾದುತ್ಥಿತಃ ಶ್ರೀಮಾನ್ ಬಿಲ್ವವೃಕ್ಷಃ ಶಿವಪ್ರಿಯಃ ।
ತತ್ರಾಸ್ತೇ ಪದ್ಮಹಸ್ತಾ ಶ್ರೀಃ ಶ್ರೀವೃಕ್ಷಸ್ತೇನ ಸ ಸ್ಮೃತಃ ॥ 5

ಬೀಜಾನ್ಯುತ್ಪಲ ಪದ್ಮಾನಾಂ ಪುನರ್ಜಾತಾನಿ ಗೋಮಯಾತ್ ।
ಗೋರೋಚನಾ ಚ ಮಾಂಗಲ್ಯಾ ಪವಿತ್ರಾ ಸರ್ವಸಾಧಿಕಾ ॥ 6

ಗೋಮೂತ್ರಾದ್ ಗುಗ್ಗುಲುರ್ಜಾತಃ ಸುಗಂಧಿಃ ಪ್ರಿಯದರ್ಶನಃ ।
ಆಹಾರಃ ಸರ್ವದೇವಾನಾಂ ಶಿವಸ್ಯ ಚ ವಿಶೇಷತಃ ॥ 7

ಯದ್ಬೀಜಂ ಜಗತಃ ಕಿಂಚಿತ್ ತಜ್ಜ್ಞೇಯಂ ಕ್ಷೀರಸಂಭವಮ್ ।
ದಧಿಜಾತಾನಿ ಸರ್ವಾಣಿ ಮಂಗಲಾನ್ಯರ್ಥಸಿದ್ಧಯೇ ॥ 8

ಘೃತಾದಮೃತಮುತ್ಪನ್ನಂ ದೇವಾನಾಂ ತೃಪ್ತಿಕಾರಣಂ ।
ಬ್ರಾಹ್ಮಣಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾಕೃತಮ್ ॥ 9

ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ।
ಗೋಷು ಯಜ್ಞಾಃ ಪ್ರವರ್ತಂತೇ ಗೋಷು ದೇವಾಃ ಪ್ರತಿಷ್ಠಿತಾಃ ।
ಗೋಷು ವೇದಾಃ ಸಮುತ್ಕೀರ್ಣಾಃ ಸಷಡಂಗ ಪದಕ್ರಮಾಃ ॥ 10

॥ ಇತಿ ಶ್ರೀ ಭವಿಷ್ಯ ಪುರಾಣೇ ಗೋಸ್ತೋತ್ರಮ್ ಸಮಾಪ್ತಮ್ ॥



# ಶ್ರೀವಿಷ್ಣುಧರ್ಮೋತ್ತರ ಪುರಾಣೇ ಗೋಮತೀ ವಿದ್ಯಾ

ಗೋಮತೀಂ ಕೀರ್ತಯಿಷ್ಯಾಮಿ ಸರ್ವಪಾಪ ಪ್ರಣಾಶಿನೀಮ್ ।
ತಾಂ ತು ಮೇ ವದತೋ ವಿಪ್ರ ಶೃಣುಷ್ವ ಸುಸಮಾಹಿತಃ ॥ 1

ಗಾವಃ ಸುರಭಯೋ ನಿತ್ಯಂ ಗಾವೋ ಗುಗ್ಗುಲಗಂಧಿಕಾಃ ।
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಪರಮ್ ॥ 2

ಅನ್ನಮೇವ ಪರಂ ಗಾವೋ ದೇವಾನಾಂ ಹವಿರುತ್ತಮಮ್ ।
ಪಾವನಂ ಸರ್ವಭೂತಾನಾಂ ರಕ್ಷಂತಿ ಚ ವಹಂತಿ ಚ ॥ 3

ಹವಿಷಾ ಮಂತ್ರಪೂತೇನ ತರ್ಪಯಂತ್ಯಮರಾನ್ ದಿವಿ ।
ಋಷೀನಾಮಗ್ನಿಹೋತ್ರೇಷು ಗಾವೋ ಹೋಮೇ ಪ್ರಯೋಜಿತಾಃ ॥ 4

ಸರ್ವೇಷಾಮೇವ ಭೂತಾನಾಂ ಗಾವಃ ಶರಣಮುತ್ತಮಮ್ ।
ಗಾವಃ ಪವಿತ್ರಂ ಪರಮಂ ಗಾವೋ ಮಂಗಲಮುತ್ತಮಮ್ ॥ 5

ಗಾವಃ ಸ್ವರ್ಗಸ್ಯ ಸೋಪಾನಂ ಗಾವೋ ಧನ್ಯಾಃ ಸನಾತನಾಃ ।
ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವಚ ॥ 6

ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ।
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಸ್ಥಿತಮ್ ॥ 7

ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ತಿಷ್ಠತಿ ।
ದೇವ ಬ್ರಾಹ್ಮಣ ಗೋಸಾಧುಸಾಧ್ವೀಭಿಃ ಸಕಲಂ ಜಗತ್ ॥ 8

ಧಾರ್ಯತೇ ವೈ ಸದಾ ತಸ್ಮಾತ್ ಸರ್ವೇ ಪೂಜ್ಯತಮಾಃ ಸದಾ ।
ಯತ್ರ ತೀರ್ಥೇ ಸದಾ ಗಾವಃ ಪಿಬಂತಿ ತೃಷಿತಾ ಜಲಮ್ ॥ 9

ಗವಾಂ ಹಿ ತೀರ್ಥೇ ವಸತೀಹ ಗಂಗಾ ಪುಷ್ಟಿಸ್ತಥಾ ತದ್ರಜಸಿ ಪ್ರವೃದ್ಧಾ ।
ಲಕ್ಷ್ಮೀಃ ಕರೀಷೇ ಪ್ರಣತೌ ಚ ಧರ್ಮಸ್ತಾಸಾಂ ಪ್ರಣಾಮಂ ಸತತಂ ಚ ಕುರ್ಯಾತ್॥

॥ ಇತಿ ಶ್ರೀ ವಿಷ್ಣುಧರ್ಮೋತ್ತರ ಪುರಾಣೇ ಗೋಮತೀ ವಿದ್ಯಾ ಸಮಾಪ್ತಮ್ ॥



# ಶ್ರೀ ಭವಿಷ್ಯಪುರಾಣೇ ಗೋಸ್ತೋತ್ರಮ್

ಕ್ಷೀರೋದತೋಯಸಂಭೂತಾ ಯಾಃ ಪುರಾಮೃತಮಂಥನೇ ।
ಪಂಚಗಾವಃ ಶುಭಾಃ ಪಾರ್ಥ ಪಂಚಲೋಕಸ್ಯ ಮಾತರಃ ॥ 1

ನಂದಾ ಸುಭದ್ರಾ ಸುರಭಿಃ ಸುಶೀಲಾ ಬಹುಲಾ ಇತಿ ।
ಏತಾ ಲೋಕೋಪಕಾರಾಯ ದೇವಾನಾಂ ತರ್ಪಣಾಯ ಚ ॥ 2

ಜಮದಗ್ನಿ ಭರದ್ವಾಜ ವಸಿಷ್ಠಾಸಿತ ಗೌತಮಃ ।
ಜಗೃಹುಃ ಕಾಮದಾಃ ಪಂಚ ಗಾವೋ ದತ್ತಾಃ ಸುರೈಸ್ತತಃ ॥ 3

ಗೋಮಯಂ ರೋಚನಾ ಮೂತ್ರಂ ಕ್ಷೀರಂ ದಧಿ ಘೃತಂ ಗವಾಮ್ ।
ಷಡಂಗಾನಿ ಪವಿತ್ರಾಣಿ ಸಂಶುದ್ಧಿಕರಣಾನಿ ಚ ॥ 4

ಗೋಮಯಾದುತ್ಥಿತಃ ಶ್ರೀಮಾನ್ ಬಿಲ್ವವೃಕ್ಷಃ ಶಿವಪ್ರಿಯಃ ।
ತತ್ರಾಸ್ತೇ ಪದ್ಮಹಸ್ತಾ ಶ್ರೀಃ ಶ್ರೀವೃಕ್ಷಸ್ತೇನ ಸ ಸ್ಮೃತಃ ॥ 5

ಬೀಜಾನ್ಯುತ್ಪಲ ಪದ್ಮಾನಾಂ ಪುನರ್ಜಾತಾನಿ ಗೋಮಯಾತ್ ।
ಗೋರೋಚನಾ ಚ ಮಾಂಗಲ್ಯಾ ಪವಿತ್ರಾ ಸರ್ವಸಾಧಿಕಾ ॥ 6

ಗೋಮೂತ್ರಾದ್ ಗುಗ್ಗುಲುರ್ಜಾತಃ ಸುಗಂಧಿಃ ಪ್ರಿಯದರ್ಶನಃ ।
ಆಹಾರಃ ಸರ್ವದೇವಾನಾಂ ಶಿವಸ್ಯ ಚ ವಿಶೇಷತಃ ॥ 7

ಯದ್ಬೀಜಂ ಜಗತಃ ಕಿಂಚಿತ್ ತಜ್ಜ್ಞೇಯಂ ಕ್ಷೀರಸಂಭವಮ್ ।
ದಧಿಜಾತಾನಿ ಸರ್ವಾಣಿ ಮಂಗಲಾನ್ಯರ್ಥಸಿದ್ಧಯೇ ॥ 8

ಘೃತಾದಮೃತಮುತ್ಪನ್ನಂ ದೇವಾನಾಂ ತೃಪ್ತಿಕಾರಣಂ ।
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾಕೃತಮ್ ॥ 9

ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ।
ಗೋಷು ಯಜ್ಞಾಃ ಪ್ರವರ್ತಂತೇ ಗೋಷು ದೇವಾಃ ಪ್ರತಿಷ್ಠಿತಾಃ ।
ಗೋಷು ವೇದಾಃ ಸಮುತ್ಕೀರ್ಣಾಃ ಸಷಡಂಗ ಪದಕ್ರಮಾಃ ॥ 10

॥ ಇತಿ ಶ್ರೀ ಭವಿಷ್ಯ ಪುರಾಣೇ ಗೋಸ್ತೋತ್ರಮ್ ಸಮಾಪ್ತಮ್ ॥



# ಅನುಬಂಧ - 2

## ಗೋ ಸೇವೆಯಿಂದ ಸಂತಾನಪ್ರಾಪ್ತಿ (ಸತ್ಯ ಕಥೆ)
## (ಶ್ರೀ ಪದ್ಮ ಮಹಾಪುರಾಣದಿಂದ)

ವೈವಸ್ವತ ಮನುವಿನ ವಂಶದಲ್ಲಿ ದಿಲೀಪ ಎಂಬ ರಾಜಶ್ರೇಷ್ಠ ಜನಿಸಿದ. ಅವನು ಧರ್ಮಿಷ್ಠ ಲೋಕಪ್ರಿಯನಾಗಿದ್ದ. ಅವನ ಪಟ್ಟದ ಮಹಿಷಿ ಸುದಕ್ಷಿಣಾ. ಬಹುಕಾಲ ಕಳೆದರೂ ಮಕ್ಕಳಾಗಲಿಲ್ಲ. ಅನ್ನದಾನ, ಗೋದಾನ, ವಸ್ತ್ರದಾನ, ಅತಿಥಿ ಅಭ್ಯಾಗತರ ಸೇವೆ, ಋತುಕಾಲದಲ್ಲಿ ಮಾತ್ರ ಪತ್ನೀಗಮನ, ತಿಥಿತ್ರಯ ಪಾಲನೆ ಇಷ್ಟೆಲ್ಲ ಸರಿಯಾಗಿ ಮಾಡಿದ್ದರೂ ಸಂತಾನವಿಲ್ಲದಿರುವುದು ರಾಜನನ್ನು ಚಿಂತೆಗೀಡು ಮಾಡಿತ್ತು. ಹಾಗಾಗಿ ದಿಲೀಪರಾಜ ತಮ್ಮ ಕುಲಗುರುಗಳಾದ ವಸಿಷ್ಠರ ಹತ್ತಿರ ಪತ್ನೀ ಸಮೇತನಾಗಿ ಬಂದ. ತನ್ನ ದುಗುಡವನ್ನು ಹೇಳಿಕೊಂಡ. ಆಗ ವಸಿಷ್ಠರು ಜ್ಞಾನದೃಷ್ಟಿಯಿಂದ ವಿಚಾರಿಸಿ ಹೇಳಿದರು.

ರಾಜ! ನೀನೊಮ್ಮೆ ದೇವಲೋಕಕ್ಕೆ ದೇವೇಂದ್ರನ ಕಾರ್ಯಕ್ಕಾಗಿ ಹೋಗಿದ್ದೆ. ಅಲ್ಲಿ ಸುರಕಾರ್ಯ ಮುಗಿದ ಬಳಿಕ ಋತುಸ್ನಾತಳಾದ ಮಡದಿಯನ್ನು ನೆನೆಸಿಕೊಂಡು ಅವಸರದಿಂದ ಹೊರಟೆ. ದಾರಿಯಲ್ಲಿ ನಂದನವನದ ಮಧ್ಯದಲ್ಲಿರುವ ಕಲ್ಪವೃಕ್ಷದ ನೆರಳಿನಲ್ಲಿ ಕಾಮಧೇನು ವಿಶ್ರಮಿಸಿತ್ತು. ನೀನು ಪತ್ನಿಯಲ್ಲಿ ಮನಸ್ಸಿಟ್ಟು ಆ ಕಾಮಧೇನುವನ್ನು ನಮಸ್ಕರಿಸದೇ, ಪ್ರದಕ್ಷಿಣೆ ಹಾಕದೇ, ಉಲ್ಲಂಘಿಸಿ ಹಾಗೆಯೇ ರಾಜಧಾನಿಗೆ ಮರಳಿಬಂದೆ. ಅದನ್ನು ನೋಡಿ ಆ ಕಾಮಧೇನುವು ನಿನಗೆ ಶಾಪ ಕೊಟ್ಟಿತು. ನೀನು ಅದನ್ನು ಕೇಳಿಸಿಕೊಳ್ಳಲಿಲ್ಲ. ಕಾರಣ ಈಗ ನೀನು ಕಾಮಧೇನುವಿನ ಮಗಳಾದ, ನಮ್ಮ ಆಶ್ರಮದಲ್ಲಿರುವ 'ನಂದಿನಿ' ಯನ್ನು ಭಕ್ತಿಯಿಂದ ಸೇವೆಮಾಡು. ಶ್ರದ್ಧೆಯಿಂದ ಸೇವಿತಳಾದ ನಂದಿನಿಯು ನಿನಗೆ ಸತ್ಪುತ್ರನನ್ನು ಪ್ರದಾನಮಾಡುವಳು.

ಆ ಪ್ರಕಾರ ದಿಲೀಪರಾಜನು ಕಾಮಧೇನುವಿನ ದೌಹಿತ್ರ ಸಂತತಿಯಾದ ನಂದಿನಿಯನ್ನು ಹಗಲಿರುಳೂ ಶ್ರದ್ಧೆಯಿಂದ ಸೇವಿಸಲು ಪ್ರಾರಂಭಿಸಿದನು. ನಿತ್ಯದಲ್ಲಿ ದಿಲೀಪರಾಜನು ನಂದಿನಿಯನ್ನು ಅರಣ್ಯಕ್ಕೆ ಮೇಯಲು ಕರೆದುಕೊಂಡು ಹೋಗುತ್ತಿದ್ದ. ಅದರ ಮೈತಿಕ್ಕಿ ಸ್ವಚ್ಛಮಾಡಿ ನೊಣಗಳು ಕೂಡದಂತೆ ಅದರ ಸೇವೆಗೈಯುತ್ತ ಸಾಯಂಕಾಲ ಮನೆಗೆ ಮರಳಿ ಬರುತ್ತಿದ್ದ. ಹೀಗೆ ಸಾಯಂಕಾಲ ಬರುವಾಗ ಮಹಾರಾಣಿ ಸುದಕ್ಷಿಣೆಯು ಎದುರುಗೊಂಡು ಪೂಜೆ ಸಲ್ಲಿಸುತ್ತಿದ್ದಳು. ನಂದಿನಿಯು ಅವರಿಬ್ಬರ ಸೇವೆಯನ್ನು ಸಂತೋಷದಿಂದ ಸ್ವೀಕರಿಸುತ್ತಿತ್ತು. ಇಪ್ಪತ್ತೊಂದು ದಿನ ಈ ಸೇವೆ ಅವ್ಯಾಹತವಾಗಿ ನಡೆಯಿತು.

ಒಂದು ದಿನ ನಂದಿನಿಯು ದಿಲೀಪರಾಜನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಹಿಮಾಲಯದ ಎತ್ತರದ ಗುಹೆಯೊಂದನ್ನು ಪ್ರವೇಶಿಸಿತು. ದಿಲೀಪನು ಒಂದು ಕ್ಷಣ ಆ

ಹಿಮಾಲಯದ ಉತ್ತುಂಗಶೃಂಗದ ಹೃದಯಂಗಮವಾದ ನೋಟವನ್ನು ನೋಡುವುದರಲ್ಲಿ ತಲ್ಲೀನನಾಗಿದ್ದ. ಆ ಕ್ಷಣದಲ್ಲಿ ಒಮ್ಮೆಲೆ ಸಿಂಹವೊಂದು ಗುಹೆಯಲ್ಲಿ ಹೊಕ್ಕು ನಂದಿನಿಯನ್ನು ಬಲಾತ್ಕಾರವಾಗಿ ಹಿಡಿಯಿತು.

ಸಿಂಹದ ಆಕ್ರಮಣದಿಂದ ದಿಗಲುಗೊಂಡ ನಂದಿನಿಯು ಕೆಟ್ಟ ದನಿಯಿಂದ ಚೀರಿತು. ಕೂಡಲೇ ರಾಜನ ದೃಷ್ಟಿ ನಂದಿನಿಯ ಕಡೆಗೆ ಹೊರಳಿತು. ನಂದಿನಿ ದುಃಖದಿಂದ ಕಣ್ಣೀರು ಸುರಿಸುತ್ತಲಿತ್ತು. ದಿಲೀಪರಾಜ ತನ್ನ ಬತ್ತಳಿಕೆಯಿಂದ ಬಾಣವನ್ನು ಎತ್ತಲು ಹೋದಾಗ ಅವನ ಕೈ ಸ್ತಂಭಿತವಾಗಿತ್ತು. ಬಾಣ ಎಳೆದುಕೊಳ್ಳಲು ಸಾಧ್ಯವಾಗಲಿಲ್ಲ, ಜಡನಂತೆ ನಿಂತುಬಿಟ್ಟ. ಆಗ ಸಿಂಹವು ರಾಜನನ್ನು ಕುರಿತು ಹೇಳಿತು.

ರಾಜ! ನಾನು ಮಹಾದೇವರ ಅನುಚರ ಕುಂಭೋದರ. ಅಲ್ಲಿ ಕಾಣುವ ದೇವದಾರು ಮರ ರಕ್ಷಿಸಲು ಪಾರ್ವತೀದೇವಿಯು ನನ್ನನ್ನು ಸಿಂಹವನ್ನಾಗಿ ಮಾಡಿ ಇಲ್ಲಿ ಸ್ಥಾಪನೆ ಮಾಡಿದ್ದಾಳೆ ಮತ್ತು ಇಲ್ಲಿ ಯಾವ ಪ್ರಾಣಿ ಬಂದರೂ ಅದು ನಿನ್ನ ಆಹಾರವಾಗಲೆಂದು ವರವಿತ್ತಿದ್ದಾಳೆ. ಕಾರಣ ನಾನಿಲ್ಲಿ ರಕ್ಷಣೆಗಾಗಿ ಇದ್ದೇನೆ. ನಿನ್ನ ಕೈ ಸ್ತಂಭಿತವಾಗಿದ್ದಕ್ಕೆ ಆಶ್ಚರ್ಯಪಡಬೇಡ. ಇದು ಮಹಾದೇವರ ಶಕ್ತಿಯ ಪ್ರಭಾವ. ನಾನು ಸಾಮಾನ್ಯ ಸಿಂಹನಲ್ಲ. ನಿನ್ನ ಆಟ ಇಲ್ಲಿ ನಡೆಯದು. ನನ್ನ ಸೀಮೆಯೊಳಗೆ ಬಂದ ಈ ನಂದಿನಿ ನನಗೆ ಆಹಾರವಾಗಿದೆ. ನೀನು ಮರಳಿ ಹೊರಟು ಹೋಗು, ನಿನ್ನನ್ನು ರಕ್ಷಿಸಿಕೋ.

ದಿಲೀಪರಾಜ ಉತ್ತರವಾಗಿ ಸಿಂಹಕ್ಕೆ ಹೇಳಿದ - ಮಹಾದೇವರು ನನಗೂ ಪೂಜ್ಯರೇ, ಮಾನ್ಯರೇ, ಆದರೆ ಸಿಂಹರಾಜ ! ನನ್ನದೊಂದು ವಿಜ್ಞಾಪನೆ ಕೇಳು. ಬ್ರಹ್ಮರ್ಷಿಗಳಾದ ವಸಿಷ್ಠರು ನಮ್ಮ ಕುಲ ಗುರುಗಳು. ಈ ನಂದಿನಿಯು ಅವರ ಹೋಮದ ಧೇನುವು. ಈ ನಂದಿನಿಯನ್ನು ನನಗೆ ಸಂತಾನ ಪ್ರಾಪ್ತಿಗಾಗಿ ಅವರು ಆರಾಧನೆ ಮಾಡು ಎಂಬುದಾಗಿ ಆದೇಶವಿತ್ತಿರುವರು. ಇದರ ಮಗು ಮನೆಯಲ್ಲಿ ತಾಯಿಗಾಗಿ ಪರಿತಪಿಸುತ್ತಿದೆ. ಈ ಧೇನುವನ್ನು ನಿನ್ನ ಬಾಯಿಗೆ ಕೊಟ್ಟು ನಾನು ಮನೆಗೆ ಹೋಗಲಾರೆ, ಬೇಕಿದ್ದರೆ ನನ್ನನ್ನೇ ನಿನ್ನ ಆಹಾರವಾಗಿ ಸ್ವೀಕರಿಸಿ ಧೇನುವನ್ನು ಬಿಟ್ಟು ಬಿಡು. ನನಗೆ ಬರುವ ಅಪವಾದ ತಪ್ಪಿಸು. ಇದೋ ಈ ಶರೀರವನ್ನೇ ಆಹಾರವಾಗಿ ಹೊಂದು. ನನ್ನ ಕರ್ತವ್ಯ ಮಾಡಲು ಅನುಕೂಲ ಮಾಡಿಕೊಡು.

ದಿಲೀಪರಾಜನು ಪ್ರಾರ್ಥನೆ ಮಾಡಿಕೊಂಡ ಬಳಿಕ ನಂದಿನಿಯು ದೀನದೃಷ್ಟಿಯಿಂದ ಮಹಾರಾಜನ ಕಡೆಗೆ ನೋಡಿತು. ಸಿಂಹದ ಕಡೆಗೂ ನೋಡಿತು. ಸಿಂಹವು ರಾಜನ ಪ್ರಾರ್ಥನೆ ಮನ್ನಿಸಿತು. ಆ ಕ್ಷಣದಲ್ಲಿ ರಾಜ ತನ್ನ ದೇಹ ಮುದುರಿಸಿ ಸಿಂಹದ ಮುಂದೆ ತಿನ್ನಲು ಇರಿಸಿದ. ಇನ್ನೇನು ಸಿಂಹ ತನ್ನ ಮೇಲೆ ಹಾರುವುದು ಎನಿಸಿದಾಗ ಆ ದಿಲೀಪರಾಜನ ಮೇಲೆ ಪುಷ್ಪವೃಷ್ಟಿಯಾಯಿತು. ದೇವತೆಗಳು ದಿಲೀಪನ ಮೇಲೆ ಹೂಮಳೆಗರೆದಿದ್ದರು. ಆಗ ನಂದಿನಿಯು ವತ್ಸ ! ಎನ್ನಲು ರಾಜ ಮುಖ ಮೇಲೆತ್ತಿ ನೋಡಿದ, ಅಲ್ಲಿ ಸಿಂಹವಿರಲಿಲ್ಲ. ನಂದಿನಿಯು ಕ್ಷೀರಧಾರೆ ಸುರಿಸುತ್ತ ನಿಂತಿತ್ತು.

ನಂದಿನಿಯು ರಾಜನನ್ನು ಕುರಿತು ರಾಜನೇ! ನಿನ್ನ ಶ್ರದ್ಧೆಯನ್ನು ಪರೀಕ್ಷಿಸಲು ನಾನೇ ಮಾಯೆಯಿಂದ ಸಿಂಹವನ್ನು ಸೃಷ್ಟಿಮಾಡಿದ್ದೆ. ವಸಿಷ್ಠ ಮಹರ್ಷಿಗಳ ತಪಃ ಪ್ರಭಾವದಿಂದ ಯಾರೂ ನನ್ನನ್ನು ಹಿಂಸಿಸಲಾರರು. ನಿನ್ನ ಸೇವೆಯಿಂದ ನಾನು ಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರ ಬೇಡು ಎಂದು ಹೇಳಿತು.

ದಿಲೀಪರಾಜನು ನಂದಿನಿಯನ್ನು ಕುರಿತು ಹೇಳಿದನು. 'ನನ್ನ ವಂಶದ ಕೀರ್ತಿಯನ್ನು ಬೆಳೆಸುವ ಒಂದು ಗಂಡು ಮಗುವನ್ನು ಕರುಣಿಸು'. ಆಗ ನಂದಿನಿಯು ದಿಲೀಪನೇ ಈಗ ನೀನು ಒಂದು ದೊನ್ನೆಯಲ್ಲಿ ನನ್ನ ಹಾಲನ್ನು ಹಿಂಡಿ ಇಲ್ಲೇ ಪಾನ ಮಾಡು ಇದರಿಂದ ನಿನಗೆ ಕುಲದೀಪನಾದ ಪುತ್ರ ಜನಿಸುವನು ಎಂದು ಹೇಳಿತು. ದಿಲೀಪರಾಜನು ಹಾಗೇ ಮಾಡಿ ವಸಿಷ್ಠರ ಹತ್ತಿರ ಬರಲು ಅವರು ಕೂಡ ರಾಜನೇ! ನೀನು ಉತ್ತಮ ಸಂತಾನ ಪಡೆದು ಕೃತಾರ್ಥನಾಗುವಿ ಎಂದು ಹರಸಿ ದಂಪತಿಗಳನ್ನು ಬೀಳ್ಕೊಟ್ಟರು.



# ಗೋಮೂತ್ರದ ಚಮತ್ಕಾರ (ಸತ್ಯಕಥೆ)

ಕುಮಾರಿ ಶ್ರದ್ಧಾ ಚೌಧರಿ 21 ವರ್ಷದ ಯುವತಿ. ಅವಳಿಗೆ 1998ರಲ್ಲಿ ಒಮ್ಮೆ ಕೆಮ್ಮು ನೆಗಡಿ, ಜ್ವರ ಪ್ರಾರಂಭವಾದವು. ಸಾಮಾನ್ಯ ಚಿಕಿತ್ಸೆಗೆ ವಾಸಿಯಾಗಲಿಲ್ಲ. ವೈದ್ಯರು ಔಷಧಿ ಕೊಟ್ಟರೂ ಜ್ವರ ಕಡಿಮೆಯಾಗುವ ಬದಲು ಮುಖವೆಲ್ಲ ಊದಿಕೊಂಡಿತು. ವೈದ್ಯರ ಸಲಹೆಯಂತೆ ಜಯಪುರ ಸರ್ಕಾರಿ ಆಸ್ಪತ್ರೆಗೆ ತೋರಿಸಲಾಯಿತು. ಅವರು ಎಕ್ಸರೇ ಮಾಡಿ ಆ ಯುವತಿಗೆ 'ವಿಷಮಶೀತ ಜ್ವರ' ಎಂದರು. ಚಿಕಿತ್ಸೆ ಮಾಡುತ್ತಿದ್ದರೂ ಕಾಯಿಲೆ ಅಧಿಕವಾಯಿತು.

ಜನೇವರಿ 26ರಂದು ಆಕೆಯನ್ನು ಆಸ್ಪತ್ರೆಗೆ ಸೇರಿಸಿದರು. ಶರೀರಾದ್ಯಂತವಾಗಿ ಬಾವು ಕಾಣಿಸಿಕೊಂಡಿತು. ವಾಂತಿಯೂ ಶುರುವಾಯಿತು. ವೈದ್ಯರು 3-4 ದಿನಗಳಲ್ಲಿ ಸರಿಹೋಗುವುದೆಂದರು. 28-01-1998 ರಂದು ರಕ್ತ ತಪಾಸಣೆ ಮಾಡಿದರು. ಆಗ ಅವರಿಗೆ ಅವಳ ಮೂತ್ರಪಿಂಡಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದು ತಿಳಿದು ಬಂತು. ಬಹು ದಿನಗಳಿಂದ ಈ ಸಮಸ್ಯೆ ಇತ್ತೆಂದು ಶಂಕಿಸಿದರು. ಕಳೆದ ಆರು ವರ್ಷಗಳಿಂದ ಆ ಯುವತಿ ಆರೋಗ್ಯವಾಗಿದ್ದಳು. ಕಾರಣ ಅವಳ ತಂದೆಗೆ ವಿಶ್ವಾಸ ಬರಲಿಲ್ಲ.

ಇದರ ನಂತರ ಜಯಪುರ ಮಾನಸಿಂಗ ಆಸ್ಪತ್ರೆಯಲ್ಲಿ 'ಡಯಾಲಿಸಿಸ್' ಚಿಕಿತ್ಸೆ ಪ್ರಾರಂಭವಾಯಿತು. ಎರಡು ವಾರಗಳಲ್ಲಿ 5 ಸಾರಿ ಡಯಾಲಿಸಿಸ್ ಚಿಕಿತ್ಸೆ ಮಾಡಲಾಯಿತು. ನಂತರ ರೋಗಿಯ ಪರೀಕ್ಷಾ ವರದಿಯನ್ನು ಗುಜರಾತಿನ ಮೂತ್ರಕೋಶದ ಆಸ್ಪತ್ರೆಗೆ ಕಳಿಸಿದರು. ಇದು ವಾಸಿಯಾಗದ ಕಾಯಿಲೆ. ಈಗ ಅವಳ ಮೂತ್ರ ಪಿಂಡಗಳನ್ನು ಬದಲಾಯಿಸುವುದೇ ಸೂಕ್ತ ಪರಿಹಾರವೆಂದರು. ಈ ಚಿಕಿತ್ಸೆಗಾಗಿ ಫೆಬ್ರುವರಿ 14 ರಂದು ರೋಗಿಯನ್ನು ಮುಂಬಯಿನ ಜಸ್‌ಲೋಕ ಆಸ್ಪತ್ರೆಗೆ ಕರೆದುಕೊಂಡು ಹೋದರು. ಅಲ್ಲಿ ಮೂತ್ರಪಿಂಡ ದಾನಿಯನ್ನು ಹುಡುಕಿ ಮಾರ್ಚ ತಿಂಗಳ ಮೊದಲ ವಾರದಲ್ಲಿ ಮೂತ್ರಪಿಂಡ ಬದಲಿ ಮಾಡುವದೆಂದು ತೀರ್ಮಾನಿಸಿದರು. ರೋಗಿಯ ರಕ್ತದಲ್ಲಿ ಪ್ರತಿರೋಧಕ ಕಣಗಳು (ಆ್ಯಂಟಿ ಬಾಡಿಸ್) ಸಾಕಷ್ಟಿರುವುದರಿಂದ ಈ ಚಿಕಿತ್ಸೆ ಮಾಡುವಲ್ಲಿ ತೊಂದರೆ ಆಗಬಹುದೆಂದು ಶಂಕಿಸಿ ಅವುಗಳನ್ನು ಕಡಿಮೆ ಮಾಡಲು ಅಗತ್ಯವಾದ ಔಷಧಿ ನೀಡಿದರು. ಈ ಮಧ್ಯೆ ವಾರದಲ್ಲಿ 3 ಸಾರಿ ಡಯಾಲಿಸಿಸ್ ನಡೆದೇ ಇತ್ತು. ವಾರಕ್ಕೆ ಸುಮಾರು 12000/- ರೂ. ಖರ್ಚಾಗುತ್ತಿತ್ತು. ಔಷಧೋಪಚಾರ ನಡೆದಿದ್ದರೂ ಆ ಪ್ರತಿರೋಧಕ ರಕ್ತಕಣಗಳು ಕಡಿಮೆಯಾಗಲಿಲ್ಲ. ಹಾಗಾಗಿ ಮೂತ್ರಪಿಂಡ ಬದಲಾಯಿಸುವಿಕೆಯನ್ನು ಮುಂದೆ ಮುಂದೆ ಹಾಕುತ್ತಿದ್ದರು. ಕೊನೆಗೆ ಪ್ರತಿರೋಧಕ ರಕ್ತಕಣಗಳು ಕಡಿಮೆಯಾಗದ್ದರಿಂದ ಮೂತ್ರ ಪಿಂಡ ಅಳವಡಿಸುವ ಚಿಕಿತ್ಸೆಯನ್ನು ನಿರಾಕರಿಸಿದರು. ಜೂನ ತಿಂಗಳಲ್ಲಿ ರೋಗಿಯನ್ನು ಮರಳಿ ಜಯಪುರಕ್ಕೆ ಕರೆತರುವ ತೀರ್ಮಾನ ಮಾಡಿದರು.

ಆ ಸಮಯದಲ್ಲಿ ಭಾಗ್ಯವಶಾತ್ ದುರ್ಗಾಪುರದ ರಾಜಸ್ಥಾನ ಗೋಸೇವಾ ಸಂಘದ ರಾಜವೈದ್ಯರೊಬ್ಬರು ಜಯಪುರಕ್ಕೆ ಬಂದಿದ್ದರು. ರೋಗಿಯ ತಂದೆಯವರು ಆ ರಾಜ ವೈದ್ಯರನ್ನು ಭೇಟಿ ಮಾಡಿ ತಮ್ಮ ಮಗಳ ಕಾಯಿಲೆ ಬಗ್ಗೆ ಸವಿಸ್ತಾರ ತಿಳಿಸಿದರು. ಅವರು ರೋಗಿಯ ಮೂತ್ರ ಪಿಂಡದಲ್ಲಿರುವ ಅಶುದ್ಧ ರಕ್ತವನ್ನು ಶುದ್ಧಿಗೊಳಿಸುವ ಜರಡಿಯಂತಿರುವ 'ನೆಫ್ರೋನ್ಸ್' ಮೇಲೆ ಔಷಧಿಗಳ ಪ್ರಭಾವದಿಂದ ರಕ್ತ ಹೆಪ್ಪುಗಟ್ಟಿರುವುದರಿಂದ ಈ ರೀತಿ ತೊಂದರೆ ಆಗಿರಬಹುದೆಂದು ಅಭಿಪ್ರಾಯಪಟ್ಟು ಆ ರೋಗಿಗೆ 'ಗೋಮೂತ್ರ' ಚಿಕಿತ್ಸೆ ಮಾಡಿಸಿದರೆ ಗುಣಮುಖವಾಗುವುದೆಂದು ಹೇಳಿದರು. ವೈದ್ಯರಾಜರ ಸಲಹೆಯಿಂದ ರೋಗಿಯ ತಂದೆಗೆ ಸಮಾಧಾನವೆನಿಸಿ ಅವರು ತಮ್ಮ ಮಗಳನ್ನು ಜಯಪುರಕ್ಕೆ ಕರೆತಂದು ಔಷಧಿ ಕೊಡಿಸುವುದಾಗಿ ತೀರ್ಮಾನಿಸಿದರು. ಆದರೆ ಅನೇಕ ಜನರು ಜಸ್‌ಲೋಕದಂಥ ಆಸ್ಪತ್ರೆಯಲ್ಲಿ ಆಗದ ಉಪಚಾರ ಇಲ್ಲಿ ಸಾಧ್ಯವಿಲ್ಲ. ಇದು ಮೂರ್ಖತನವೆಂದೇ ಭಾವಿಸಿ ಮಾತನಾಡಿಕೊಂಡರು. ರೋಗಿಯ ತಂದೆ ಜೂನ 13ರಂದು ಮಗಳನ್ನು ಕರೆತಂದು ಆ 'ಗೋಮೂತ್ರ ಚಿಕಿತ್ಸಾ ವಿಧಾನ' ಪ್ರಾರಂಭಿಸಿದರು. ಅಲ್ಲಿಂದ ಚಿಕಿತ್ಸೆ ಒಂದು ವಾರ ನಡೆಯಿತು. ರೋಗ ಕ್ರಮೇಣ ವಾಸಿಯಾಗುವಂತೆ ಲಕ್ಷಣಗಳು ಕಾಣಿಸಿದವು. ಜೂನ 18 ರ ನಂತರ ರೋಗಿಗೆ ಡಯಾಲಿಸಿಸ್ ಮಾಡಿಸುವ ಅಗತ್ಯ ಬರಲಿಲ್ಲ. ರೋಗಿಯಲ್ಲಿ ಯಾವ ವಿಕಾರವೂ ಕಂಡು ಬರಲಿಲ್ಲ. 'ಬಾವು' ಸಹ ಅಧಿಕಗೊಳ್ಳಲಿಲ್ಲ. ಮುಖದ ಬಾವು ಕಡಿಮೆಯಾಯಿತು. ಮಾಸಿಕ ಕ್ರಿಯೆ ನಿಯಮಿತವಾಯಿತು. ಈಗ ಸಾಕಷ್ಟು ನೀರು ಕುಡಿಯಲು ಆರಂಭಿಸಿದಳು.

ಕ್ರಮೇಣ ರೋಗಿಯು ಗೋಸೇವಾ ಸಂಘದ ಅಂಗಳದಲ್ಲಿ ನಿಧಾನವಾಗಿ ಓಡಾಡಲು ಆರಂಭಿಸಿದಳು. ತಂದೆ ತಾಯಿಗಳಿಗೆ ಸಂತೋಷವಾಯಿತು. 6-7 ಲಕ್ಷ ರೂ. ಖರ್ಚು ಮಾಡಿ ನೂತನ ಮೂತ್ರಪಿಂಡ ಅಳವಡಿಸಿದ್ದರೂ ಅವಳು ಪೂರ್ತಿ ಗುಣಮುಖವಾಗುವ ನಿರೀಕ್ಷೆ ಇರಲಿಲ್ಲ.

ಈಗ ಗೋಮೂತ್ರ ಚಿಕಿತ್ಸೆಯಿಂದ ಅವಳು ಪೂರ್ತಿ ಗುಣಮುಖಳಾಗಿ ಜಯಪುರ ಕಾಲೇಜಿನಲ್ಲಿ ಓದಿ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ಎಲ್ಲರಿಗೂ ಸುಖ ನೀಡಿ ತಾನೂ ಸಂತೋಷವಾಗಿದ್ದಾಳೆ.

ಇದೆಲ್ಲವೂ 'ಗೋಮೂತ್ರ ಚಿಕಿತ್ಸೆಯ' ಚಮತ್ಕಾರವೇ ಸರಿ. ಗೋಮಾತೆಗೆ ಜಯವಾಗಲಿ.



# ಗೋಮಾತೆಯಿಂದ ಕುಟುಂಬ ರಕ್ಷಣೆ (ಸತ್ಯಕಥೆ)

ಮಧ್ಯಪ್ರದೇಶದ ಜಬಲ್‌ಪುರದಲ್ಲಿ ಶ್ರೀವಾಸ್ತವ ಕುಟುಂಬವೊಂದು ವಾಸಿಸುತ್ತಿದೆ. ಅವರು ಕಳೆದ 40 ವರ್ಷಗಳಿಂದ ಗೋಪಾಲನೆಯನ್ನು ಮಾಡುತ್ತಾ ಬರುತ್ತಿದ್ದಾರೆ. ಮನೆಯಲ್ಲಿ ಎಲ್ಲರೂ ಗೋಸೇವಾಕಾರ್ಯವನ್ನು ಚೆನ್ನಾಗಿ ಮಾಡುತ್ತಿದ್ದಾರೆ.

22-06-2000ದಂದು ಸಂಜೆ ಸೊಳ್ಳೆಗಳು ಹಸುಗಳನ್ನು ಕಚ್ಚದಿರುವಂತೆ ಒಂದು ಪಾತ್ರೆಯಲ್ಲಿ ಬೆರಣಿ ಹಾಗೂ ಹುಲ್ಲಿಗೆ ಬೆಂಕಿ ಹಚ್ಚಿ ಹೊಗೆ ಉಂಟು ಮಾಡಿದರು. ಆ ದಿನ ರಾತ್ರಿ ಸುಮಾರು 10 ಗಂಟೆಯ ವೇಳೆಗೆ ಎಲ್ಲರೂ ನಿದ್ರೆ ಹೋದರು. ಬೆಂಕಿ ಹಚ್ಚಿದ್ದ ಬೆರಣಿ ಹಾಗೂ ಇತರ ಹುಲ್ಲು ಮೊದಲಾದವು ಉರಿದು ಬೂದಿಯಾಗಿರಬೇಕೆಂದು ಊಹಿಸಿ ಆ ಕಡೆ ಗಮನ ಕೊಡದೇ ಮಲಗಿದ್ದರು. ಗೋಶಾಲೆಯಲ್ಲಿ ಒಂದು ದೊಡ್ಡ ಗೋವು, ಕರು ಸರಪಳಿಯಿಂದ ಕಟ್ಟಿಹಾಕಲ್ಪಟ್ಟಿದ್ದವು. ಪಕ್ಕದಲ್ಲಿ ಬೆರಣಿಯಗುಡ್ಡೆ ಇತ್ತು. ರಾತ್ರಿ ಒಂದೂವರೆ ಗಂಟೆಗೆ ಪಾತ್ರೆಯಲ್ಲಿ ಹಾಕಿದ್ದ ಬೆಂಕಿ ಹತ್ತಿಕೊಂಡು ಪಕ್ಕದಲ್ಲಿಟ್ಟ ಬೆರಣಿಯವರೆಗೆ ಪಸರಿಸಿ ಆ ರಾಶಿಯೇ ಹೊತ್ತಿಕೊಂಡು ಉರಿಯಲಾರಂಭಿಸಿತು. ಇದರಿಂದ ಹೊಗೆ ಎಲ್ಲ ಕಡೆ ಹರಡಿತು. ಗೋಶಾಲೆ ಹೊಗೆಯಿಂದ ಆವೃತವಾಯಿತು. ಸರಪಳಿಯಿಂದ ಕಟ್ಟಿ ಹಾಕಲ್ಪಟ್ಟಿದ್ದ ದೊಡ್ಡ ಗೋವು ಮನೆಗೆಲ್ಲಿ ಬೆಂಕಿ ಹತ್ತುವುದೋ ಎಂದು ಊಹಿಸಿ ತನ್ನ ಸ್ವಾಮಿಯನ್ನು ಕಾಪಾಡುವ ಉದ್ದೇಶದಿಂದ ತನ್ನ ಶಕ್ತಿಯಿಂದ ಆ ಕಬ್ಬಿಣದ ಸರಪಳಿಯನ್ನು ಮುರಿದು ಹಾಕಿ ಬಾಗಿಲು ಮುಚ್ಚಿದ್ದ ತನ್ನ ಯಜಮಾನನ ಕೊಠಡಿಯನ್ನು ತನ್ನ ಕೊಂಬಿನಿಂದ ತಿವಿದು ತೆರೆಯಿತು. ಶ್ರೀ ವಾಸ್ತವರು ಮಲಗಿದ್ದ ಜಾಗಕ್ಕೆ ಹೋಗಿ ಅವರನ್ನು ತಿವಿದು ಎಬ್ಬಿಸಿತು. ನಿದ್ರಾವಶರಾಗಿದ್ದ ಅವರು ಎದ್ದಾಗ ತಮ್ಮ ಮುಂದೆ ಗೋವು ನಿಂತಿರುವುದನ್ನು ನೋಡಿ ಗಾಬರಿಗೊಂಡರು. ಹೊರಗೆ ಬಂದು ನೋಡಿದಾಗ ಮನೆಯಲ್ಲಾ ಹೊಗೆಯಿಂದ ತುಂಬಿರುವುದು ಕಂಡು ಬಂತು. ಕೂಡಲೇ ಗೋಶಾಲೆಗೆ ಹೋಗಿ ನೋಡಲು ಬೆರಣಿಯೆಲ್ಲಾ ಹತ್ತಿಕೊಂಡು ದಗದಗನೆ ಉರಿಯುತ್ತಿತ್ತು. ಅಕ್ಕ ಪಕ್ಕದವರನ್ನು ಸಹ ಎಬ್ಬಿಸಿ ಬೆಂಕಿಯನ್ನು ಆರಿಸಲು ಪ್ರಯತ್ನಿಸಿದರು. ಬಕೆಟ್‌ನಿಂದ ನೀರು ಹಾಕುತ್ತ ಸಂಪೂರ್ಣ ಬೆಂಕಿ ಆರಿಸಿದರು. ಗೋಮಾತೆ ಎಲ್ಲವನ್ನೂ ನೋಡುತ್ತ ನಿಂತಿದ್ದಳು. ಸುಮಾರು ಒಂದು ತಾಸಿನ ನಂತರ ಎಲ್ಲವೂ ಹತೋಟಿಗೆ ಬಂದಿತ್ತು. ಗೋಶಾಲೆಯ ಸ್ವಲ್ಪಭಾಗ ಉರಿದು ಹೋಗಿತ್ತು. ಉಳಿದ ಭಾಗಗಳು ಸುರಕ್ಷಿತವಾಗಿದ್ದವು.

ಈ ರೀತಿ ಗೋಮಾತೆಯ ಬುದ್ಧಿ, ಸ್ವಾಮಿ ಭಕ್ತಿಯ ಹಾಗೂ ಕೃಪೆಯ ಕಾರಣದಿಂದ ಆ ಮನೆ ಅಗ್ನಿಗೆ ಆಹುತಿಯಾಗಲಿಲ್ಲ. ಸಮುಸ್ತ ಕುಟುಂಬದ ರಕ್ಷಣೆ ಗೋಮಾತೆಯಿಂದ ಆದದ್ದನ್ನು ಇಂದಿಗೂ ಅವರು ನೆನೆಸಿಕೊಳ್ಳುತ್ತಾರೆ. ಗೋಮಾತೆಗೆ ಕೃತಜ್ಞತೆ ಸಲ್ಲಿಸುತ್ತಾರೆ.



# ದೇಶಹಿತಕ್ಕಾಗಿ ಗೋರಕ್ಷಣೆ

ಭಾರತೀಯ ಸಂಸ್ಕೃತಿಯಲ್ಲಿ ನಿತ್ಯ ಪಠನೀಯವಾದ ಒಂದು ಶ್ಲೋಕ ಹೀಗಿದೆ.

ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ।
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥

ಈ ಪ್ರಾರ್ಥನಾ ಸ್ತೋತ್ರದಲ್ಲಿ ನಮ್ಮ ಋಷಿಮುನಿಗಳು ಎರಡು ಪೂಜನೀಯ ವಿಷಯಗಳನ್ನು ಗುರುತಿಸಿದ್ದಾರೆ. ಒಂದು ಗೋಮಾತೆ, ಇನ್ನೊಂದು ಬ್ರಾಹ್ಮಣ. ಇಬ್ಬರಿಗೂ ನಿತ್ಯದಲ್ಲಿ ಶುಭಕೋರುವದು, ಲೋಕದಲ್ಲಿಯ ಎಲ್ಲ ಜನರು ಸುಖಿಗಳಾಗಿರಲಿ ಎಂಬುದು ಇಲ್ಲಿನ ಮುಖ್ಯ ಆಶಯ.

ಗಾಂಧೀಜಿಯವರು ಗೋರಕ್ಷಣೆ ಸರಕಾರದ ಕರ್ತವ್ಯವೆಂದರು. ಅವರ ಇಚ್ಛೆಯಂತೆ ನಮ್ಮ ಸಂವಿಧಾನದಲ್ಲಿ 'ಗೋರಕ್ಷಣೆ ಸರಕಾರದ ಕರ್ತವ್ಯ' ಎಂದು ನಿರ್ದೇಶಿಸಲಾಗಿದೆ.

ಆದರೆ ನಂತರ ಬಂದ ರಾಜಕಾರಣಿಗಳು ಈ ಬಗ್ಗೆ ಲಕ್ಷ್ಯವಹಿಸದೇ ಹೆಚ್ಚಿನವರು ತಲೆಕೆಡಿಸಿಕೊಳ್ಳದೇ ಸುಮ್ಮನಾಗಿ ಇದ್ದು ಬಿಟ್ಟರು.

ಗೋಮಾತೆಯನ್ನು ನಿರ್ಲಕ್ಷಿಸಿದ್ದಕ್ಕಾಗಿ ಬ್ರಾಹ್ಮಣ ಸಮಾಜ, ಅದರಂತೆ ಇತರ ಸಮಾಜಗಳು ಅವನತಿ ದಾರಿ ಹಿಡಿದವು. ಒಂದು ಮಾತ್ರ ನೆನಪಿಡಬೇಕಾದ ಸಂಗತಿ ಎಂದರೆ ನಮ್ಮ ಎಲ್ಲ ಋಷಿಮುನಿಗಳಾಗಲೀ, ಮಹಾಪುರುಷರಾಗಲೀ 'ಗೋಹತ್ಯೆ ಮಹಾಪಾಪ' ಅದು ನಡೆಯಕೂಡದು ಎಂಬುದಾಗಿ ಎಚ್ಚರಿಸುತ್ತ ಬಂದಿದ್ದಾರೆ.

ಗೋರಕ್ಷಣೆಯ ವಿಚಾರ ಬಂದಾಗ ಹಾಲು ಕೊಡುವ, ಹಾಲು ಕೊಡದಿರುವ ಗೋವುಗಳೆಂದು ವರ್ಗೀಕರಣ ಮಾಡುವಂತೆ ಇಲ್ಲ. ರೈತನಿಗೆ ಹಾಲು ಕೊಡದಿರುವ ಗೋವುಗಳನ್ನು ಸಾಕಲು ಆಗದಿದ್ದರೆ ಆ ಕರ್ತವ್ಯ ಸಮಾಜಕ್ಕೆ ಸೇರಿದ್ದಾಗಿದೆ. ಇಲ್ಲವಾದರೆ ಇದನ್ನು ಬೇರೆ ಸಂಸ್ಥೆಗಳ ಮುಖಾಂತರವಾದರೂ ಮಾಡಿಸಬೇಕು. ಈ ಹಸುಗಳಿಂದ ಬರುವ ಶಗಣಿಯು ಗೊಬ್ಬರ ಉತ್ಪಾದನೆಗೆ ಸಹಾಯವಾಗುತ್ತದೆ.

ವೈಯಕ್ತಿಕವಾಗಿ ನಾವು ಗೋರಕ್ಷಣೆಯನ್ನು ಹೇಗೆ ಮಾಡಬಹುದು ? ಎಂಬ ಪ್ರಶ್ನೆ ಸಹಜ. ಇದನ್ನು ಎರಡು ವಿಧದಲ್ಲಿ ಮಾಡಬಹುದು.

ಮೊದಲನೆಯದಾಗಿ ಗೋರಕ್ಷಣೆಗೆ ಬದ್ಧವಾಗಿರುವ ಪಕ್ಷಕ್ಕೆ ಮತ ಹಾಕುವುದು. ಇದು ಅತ್ಯಂತ ಸುಲಭದ ಕೆಲಸವೇ ಸರಿ. ಗೋರಕ್ಷಣೆಗೆ ಬದ್ಧವಾಗಿರುವ ಪಕ್ಷ ಒಂದಿದೆ. ಇದನ್ನು ಗುರುತಿಸಿ ಆ ಪಕ್ಷಕ್ಕೆ ಮತ ಹಾಕುವುದು ಪ್ರತಿಯೊಬ್ಬ ಗೋಭಕ್ತನ ಕೆಲಸವಾಗಿದೆ.

ಎರಡನೆಯದಾಗಿ ಗೋಭಕ್ತರು ಹತ್ತಾರು ಜನ ಸೇರಿಕೊಂಡು ಹಾಲು ಕೊಡದ ಗೋವನ್ನು ವಠಾರದಲ್ಲಿ ಸಾಕಬಹುದು. ಗೋಗ್ರಾಸ ಮೊದಲಾದವನ್ನು ಕೊಡಲು ಹೆಚ್ಚು ಅನುಕೂಲವೂ ಆಗುತ್ತದೆ.

ಇದೆಲ್ಲವೂ ಆಗುವುದಿಲ್ಲ ಎಂದೆನಿಸಿದ್ದಾದರೆ ಆಗ ಎಲ್ಲ ಕಡೆಯಲ್ಲಿ ಪ್ರಾರಂಭವಾಗಿರುವ ಗೋರಕ್ಷಣಾ ಕೇಂದ್ರಗಳು, ಗೋಶಾಲೆಗಳಿಗೆ ಉದಾರವಾಗಿ ಹಣದ ಮೂಲಕ, ದವಸಧಾನ್ಯದ ಮೂಲಕವಾಗಿ ದಾನಮಾಡಿ ಆ ಗೋವುಗಳು ಸಂರಕ್ಷಿತವಾಗುವಂತೆ ಕ್ರಮಕೈಕೊಂಡರೆ ಎಲ್ಲವೂ ಸರಿಯಾಗುತ್ತದೆ.

ಗೋಮಾಂಸವನ್ನು ರಫ್ತುಮಾಡಿ ಡಾಲರ್‌ಗಳಿಸುವ ಅಧಿಕಾರಿಯ ಮಾತಿಗಿಂತ ನಮ್ಮ ಭಾರತೀಯ ಸಂಸ್ಕೃತಿಯ ರೂವಾರಿಗಳಾದ ಋಷಿ ಮುನಿಗಳ ಮಾತಿಗೆ ಬೆಲೆ ಕೊಟ್ಟು ದೇಶವನ್ನು ಸುಖೀದೇಶವನ್ನಾಗಿ ಮಾಡಲು ಪ್ರತಿಯೊಬ್ಬರೂ ಕಂಕಣಬದ್ಧರಾಗಬೇಕೆಂದು ಕಳಕಳಿಯ ವಿನಂತಿ ಇರುತ್ತದೆ.



# ಗ್ರಂಥಋಣ

1) ಶ್ರೀಮನ್ ಮಹಾಭಾರತ - ಶ್ರೀವೇದವ್ಯಾಸದೇವರು.
2) ಶ್ರೀಮದ್ ಭಾಗವತ - ಶ್ರೀವೇದವ್ಯಾಸದೇವರು.
3) ಶ್ರೀ ಸರ್ವಮೂಲ ಗ್ರಂಥಗಳು - ಶ್ರೀ ಮದಾನಂದತೀರ್ಥಭಗವತ್ಪಾದರು.
4) ಶ್ರೀ ಪದ್ಮಮಹಾಪುರಾಣ(ಕನ್ನಡಾನುವಾದ) - ಪಂ॥ ಪಂಢರಿನಾಥಾಚಾರ್ಯಗಲಗಲಿ
5) ಶ್ರೀ ಭವಿಷ್ಯ ಮಹಾಪುರಾಣ - ಪಂ॥ ಪಂಢರಿನಾಥಾಚಾರ್ಯ ಗಲಗಲಿ
6) ಶ್ರೀ ಚೈತ್ರಮಾಸ ಕರ್ತವ್ಯಗಳು - ಪಂ॥ ಚತುರ್ವೇದಿ ವೇದವ್ಯಾಸಾಚಾರ್ಯರು
7) ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯ - ಪಂ॥ ಕೆ. ಹಯುವದನ ಪುರಾಣಿಕರು.
8) ಶ್ರಾದ್ಧ ಮತ್ತು ಗೋವು - ಪಂ॥ ಡಾ॥ ಎಚ್. ಸತ್ಯನಾರಾಯಣಾಚಾರ್ಯ
9) ತತ್ವವಾದ ಸಂಚಿಕೆಗಳು - ಅ.ಭಾ.ಮಾ.ಮ. ಮಂಡಲ ಬೆಂಗಳೂರು
10) ಧರ್ಮಸಂದೇಶ - ಪಂ॥ ನಾಗರಹಳ್ಳಿ ಶ್ರೀನಿವಾಸಾಚಾರ್ಯರು.
11) ಶ್ರೀಹರಿಕಥಾಮೃತಸಾರ - ಶ್ರೀ ಜಗನ್ನಾಥದಾಸರು
12) ಗೋಮಾತೆ - ಶ್ರೀ ನರಸಿಂಹ ದೇಶಪಾಂಡೆ
13) ಗೋ ಚಿಕಿತ್ಸೆ - ಡಾ॥ ಗೌರಿಶಂಕರ ಮಾಹೇಶ್ವರೀ
14) ಶ್ರೀ ವರಾಹ ಪುರಾಣ - ಪಂ. ಶ್ರೀ ಪಂಢರಿನಾಥಾಚಾರ್ಯ ಗಲಗಲಿ
15) ಭಾರತದರ್ಶನ ಸಂಚಿಕೆಗಳು - ಮೆ॥ ಭಾರತ ದರ್ಶನ ಬೆಂಗಳೂರು
16) ವೇದಸಂಸ್ಕೃತಿ ಪರಿಚಯ - ಪ್ರೊ॥ ಕೆ. ಎಸ್. ನಾರಾಯಣಾಚಾರ್ಯ
17) ಧರ್ಮಸಿಂಧು - ಶ್ರೀ ಶಂಭುಶರ್ಮನಾಜಗಾರ
18) ಮಾಧ್ವಸಮಾಚಾರ ಸಂಚಿಕೆಗಳು - ಪಂ॥ ಶ್ರೀ ರಾಮವಿಠ್ಠಲಾಚಾರ್ಯರು
19) ವೃತ್ತ ಪತ್ರಿಕೆ ಲೇಖನ - ಶ್ರೀ ಕೆ. ಆರ್. ವೆಂಕಟೇಶ ಮತ್ತಿಮನೆ.
20) ಪತ್ರಿಕಾ ವರದಿ - ಶ್ರೀ ಎಲ್. ಬಿ. ದೇಸಾಯಿ ಡೋಂಬಿವಲಿ
21) ಕರ ಪತ್ರಗಳು - ಶ್ರೀ ರಾಮಚಂದ್ರಾಪುರಮಠ
22) ಶ್ರೀಸುಮಧ್ವ ವಿಜಯ ( ಕನ್ನಡಾನುವಾದ) - ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು.
23) ಗೋಸೇವಾಂಕ - ಗೀತಾ ಪ್ರೆಸ್ ಗೋರಖಪುರ
24) ಕಾರ್ತಿಕಮಾಸ ಮಹಾತ್ಮೆ - ಶ್ರೀ ಆ.ರಾ. ಪಂಚಮುಖಿ
25) ಗರುಡ ಪುರಾಣ - ಗೀತಾ ಪ್ರೆಸ್ ಗೋರಖಪುರ
26) ಶ್ರೀ ಮನ್ನ್ಯಾಯಸುಧಾ (ಕನ್ನಡಾನುವಾದ) - ಶ್ರೀ ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು.

